# ಪ್ರಮುಖ ಭಾರತೀಯ ಭಾಷೆಗಳು

(ಒಂದು ಅವಲೋಕನ)

ಲೇಖಕರು

ಬಿ. ಎಸ್. ಪ್ರಸಾದ್

ಗಾಯತ್ರಿ ಎಂಟರ್‌ಪ್ರೈಸಸ್

ನಂ. 483, ಚಾವಡಿಬೀದಿ, ಫೋರ್ಟ್ ಮೊಹಲ್ಲಾ,

ಮೈಸೂರು - 570 004.

ಪ್ರಮುಖ ಭಾರತೀಯ ಭಾಷೆಗಳು (ಒಂದು ಅವಲೋ
ಲೇಖಕರು : ಪ್ರಸಾದ್ ಬಿ. ಎಸ್., ಬಿಸ್ಲೇಹಳ್ಳಿ, ಹಿರಿಯೂರು (ಅ
ಅರಸೀಕೆರೆ (ತಾ), ಹಾಸನ ಜಿಲ್ಲೆ. ಪ್ರಕಾಶಕರು : ಗಾಯತ್ರಿ ಎಂಟರ್‌ಪ್ರೈ
ನಂ. 483, ಚಾವಡಿಬೀದಿ, ಫೋರ್ಟ್ ಮೊಹಲ್ಲಾ, ಮೈಸೂರು - 570



ಪ್ರಥಮ ಮುದ್ರಣ : 2003

ಪುಟಗಳು : 72

ಬೆಲೆ : 40

ಮುದ್ರಕರು : ತಾರಾ ಪ್ರಿಂಟಿಂಗ್ ಪ್ರೆಸ್, ಮೈಸೂರು.

# ಮೊದಲ ಮಾತು

ಮಾನವನ ಭಾಷೆಗಳು ಹಲವು. ಒಂದೊಂದು ದೇಶ, ಒಂದೊಂದು ಜನ ಸಮುದಾಯಕ್ಕೆ ಒಂದೊಂದು ಭಾಷೆಯಿದೆ. ಈ ಒಂದೊಂದು ಭಾಷೆಗಳೂ ಕೂಡ ತಮ್ಮದೇ ಆದ ಲಿಪಿ, ಉಚ್ಚಾರಣಾ ಶೈಲಿ ಲಾಲಿತ್ಯ ಗಳನ್ನು ಹೊಂದಿದ್ದು ವೈಶಿಷ್ಟ್ಯ ಪೂರ್ಣವಾಗಿವೆ.

ನಮ್ಮ ಭಾರತದೇಶದಲ್ಲಿಯೂ ಕೂಡ ಪ್ರಾದೇಶಿಕತೆಗನುಗುಣ ವಾಗಿ ಹಲವು ಭಾಷೆಗಳಿವೆ ಅಂಥ ಭಾಷೆಗಳನ್ನು ಪರಿಚಯಿಸುವ ಉದ್ದೇಶ ಈ ಪುಸ್ತಕದ್ದಾಗಿದೆ. ಇದು ಓದುಗರಿಗೆ ಪ್ರಿಯವಾದರೆ ನನ್ನ ಶ್ರಮ ಸಾರ್ಥಕ.

ಈ ಪುಸ್ತಕವನ್ನು ಪ್ರಕಾಶಿಸುತ್ತಿರುವ ಶ್ರೀ ಎಂ. ಎನ್. ಶಶಿಕುಮಾರ್ ಮತ್ತು ಅವರ ಮುದ್ರಣಾಲಯದ ಬಳಗಕ್ಕೆ ನನ್ನ ಧನ್ಯವಾದಗಳು.

ಬಿ. ಎಸ್. ಪ್ರಸಾದ್

# ಪೀಠಿಕೆ

ಭಾಷೆ ಮಾನವನ ಉಸಿರು. ಭಾಷೆಯಿಲ್ಲದ ಮನುಷ್ಯ ಪಶುವಿಗೆ ಸಮಾನ. ಈ ಭೂಮಿಯ ಮೇಲೆ ಮಾನವ ಮಾನವನಾಗಿರುವುದು, ಬುದ್ಧಿವಂತ ಪ್ರಾಣಿಯಾಗಿರುವುದು ಹಾಗೂ ಇತರೆಲ್ಲ ಜೀವಿಗಳಿಗಿಂತ ಭಿನ್ನವಾಗಿರುವುದು ಈ ಭಾಷೆಯಿಂದಲೆ ಎಂದು ನಿಸ್ಸಂಶಯವಾಗಿ ಹೇಳಬಹುದು. ಭಾಷೆಯಿಲ್ಲದಿದ್ದರೆ ಮನುಷ್ಯ ಏನಾಗುತ್ತಿದ್ದ ಅಥವಾ ಏನಾಗಿರುತ್ತಿದ್ದ ಎಂಬುದನ್ನು ಊಹಿಸಲು ಕೂಡ ಸಾಧ್ಯವಿಲ್ಲ. ಹಾಗಾಗಿ ಈ ಭಾಷೆಯೆಂಬುದು ಮಾನವನ ಅವಿಭಾಜ್ಯ ಅಂಗ. ಅವನ ಅತ್ಯಮೂಲ್ಯ ಆಸ್ತಿ. ಮಾನವನ ಶಾರೀರಿಕ ಅಂಗಗಳಾದ ಕೈ ಕಾಲುಗಳಂತೆ ಭಾಷೆಯೂ ಕೂಡಾ ಮುಖ್ಯವಾದುದೇ ಆಗಿದೆ.

ಮಾನವ ಸಮಾಜಜೀವಿಯಾಗಿ ಸಮುದಾಯದಲ್ಲಿ ಪರಸ್ಪರ ಸಲಹೆ-ಸಹಕಾರಗಳಿಂದ, ಹೊಂದಾಣಿಕೆಯಿಂದ ಬಾಳಬೇಕೆಂದರೆ ಅವನಿಗೆ ಖಂಡಿತ ಭಾಷೆ ಬೇಕೇ ಬೇಕು. ಮನುಷ್ಯ ಬದುಕಿನ ಪ್ರತಿಯೊಂದು ಕ್ಷೇತ್ರದಲ್ಲಿಯೂ ಕೂಡ ಭಾಷೆ ಇದ್ದೇ ಇದೆ. ಆ ಕಾರಣದಿಂದಲೇ ಭಾರತದ ಪ್ರಮುಖ ದಾಕ್ಷಿಣಾತ್ಯ ಅಲಂಕಾರಿಕ "ದಂಡಿ" ಎಂಬುವವನು 'ಮಾತೆಂಬ ಜ್ಯೋತಿಯು ಬೆಳಗದೆ ಇದ್ದರೆ ಅಶೇಷ ಭುವನತ್ರಯವು ಕತ್ತಲಾಗುತ್ತದೆ' ಎಂದು ಹೇಳಿದ್ದಾನೆ. ದಂಡಿ ಹೇಳಿರುವ ಈ ಮಾತು ಮಾನವ ಬದುಕಿನಲ್ಲಿ ಭಾಷೆಯ ಪ್ರಾಮುಖ್ಯತೆ ಎಷ್ಟು ಎಂಬುದನ್ನು ತಿಳಿಸುತ್ತದೆ.

ಭಾಷೆ ಎಂದರೇನು? ಎಂಬ ಪ್ರಶ್ನೆ ನಮಗೆ ಎದುರಾದಾಗ ನಿರ್ದಿಷ್ಟ ಹಾಗೂ ನಿಖರವಾದ ವ್ಯಾಖ್ಯಾನದಲ್ಲಿ ಉತ್ತರ ಕೊಡುವುದು ಸ್ವಲ್ಪ ಕಷ್ಟದ ಕೆಲಸ. ಆದರೂ ಸಾಮಾನ್ಯ ಅರ್ಥದಲ್ಲಿ ಹೇಳುವುದಾದರೆ 'ಮನುಷ್ಯನು ತನ್ನ ಮನದಾಳದ ಭಾವನೆಗಳು ಬಯಕೆ ಹಾಗೂ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ಮಾಡಿಕೊಂಡಿರುವ ಧ್ವನಿಸಂಕೇತಗಳ ಒಂದು ವ್ಯವಸ್ಥೆ' ಎಂದು ಹೇಳಬಹುದು. ಈ ಭಾಷೆ ಎಂಬುದು ಮಾನವನ ಹಂತ ಹಂತವಾದ ಬೆಳವಣಿಗೆಯೊಟ್ಟಿಗೆ ಹುಟ್ಟಿ ಬೆಳೆದು ಒಂದು ನಿರ್ದಿಷ್ಟ ರೂಪವನ್ನು ಪಡೆದಿದೆ. ಮೊದಮೊದಲು ಆದಿಮಾನವ ತನ್ನ ಬೇಕು-ಬೇಡಗಳನ್ನು ಇತರರಿಗೆ ತಿಳಿಸಲು ಹಾಗೂ ಇತರರ ಬೇಕು ಬೇಡಗಳನ್ನು ತಾನು ಅರಿಯಲು ಕೆಲವೊಂದು ಸಂಕೇತ-ಸಂಜ್ಞೆಗಳು,

ವಿಚಿತ್ರವಾದ ಕೂಗುಗಳನ್ನು ಪ್ರಯತ್ನಪೂರ್ವಕವಾಗಿ ಬಳಸಲಾರಂಭಿಸಿದ. ಕಾಲಕಾಲಕ್ಕೆ ಮಾನವ ಜೀವನ ವಿಕಾಸ ಹೊಂದಿದಂತೆ ಒಂದು ಹಂತದಲ್ಲಿ ಈ ಸಂಕೇತ, ಸಂಜ್ಞೆಗಳು, ಕೀರಲು ಧ್ವನಿಗಳು ಒಂದು ವ್ಯವಸ್ಥಿತವಾದ ರೂಪ ಪಡೆದವು. ಸ್ಪಷ್ಟವೂ, ನಿರ್ದಿಷ್ಟವೂ ಆದ ಸ್ವರ, ಲಯಬದ್ಧತೆ ಪಡೆದವು. ಇಂತಹದ್ದನ್ನು ಇಂತಹದ್ದೇ ಎಂದು ಕರೆಯಬೇಕು ಎಂಬ ಪರಿಜ್ಞಾನ ಬಂದಿತು. ಕ್ರಮೇಣ ಅದೇ ರೂಢಿಗತವೂ ಆಯಿತು. ಈ ಎಲ್ಲದರ ಪರಿಣಾಮವಾಗಿ ಭಾಷೆ ಎಂಬ ಸಂವಹನದ ಮಾಧ್ಯಮ ರೂಪ ತಳೆಯಿತು.

ಭಾಷೆ ದೈವದತ್ತವಾದ ಕ್ರಿಯೆ ಎಂದು ಕೆಲವರು ಹೇಳುತ್ತಾರೆ. ಇದು ಶುದ್ಧ ಸುಳ್ಳು. ಭಾಷೆಯೆಂಬುದು ಮಾನವನ ಪ್ರಯತ್ನಪೂರ್ವಕ ಕ್ರಿಯೆ. ಅದನ್ನು ಮನುಷ್ಯ ಶ್ರಮದಿಂದ ಕೂಡಿದ ಪ್ರಯತ್ನದಿಂದ ಕಲಿಯುತ್ತಾನೆ. ಉದಾಹರಣೆಗೆ ನೋಡುವುದಾದರೆ ಮಗು ಜನಿಸಿ ಅನೇಕ ತಿಂಗಳುಗಳ ಕಾಲ ಅದಕ್ಕೆ ಭಾಷೆ ಎಂಬುದು ತಿಳಿದಿರುವುದೇ ಇಲ್ಲ. ಕಾಲಕ್ರಮೇಣ ಅದು ತನ್ನ ತಾಯಿಯ ಹಾಗೂ ಇತರರ ಧ್ವನಿಗಳನ್ನು ಅನುಕರಿಸುವ ಪ್ರಯತ್ನ ಮಾಡುತ್ತದೆ. ತನ್ನದೇ ಆದ ತೊದಲು ನುಡಿಯಲ್ಲಿ ಅಪ್ಪ, ಅಮ್ಮ, ಹಾಲು, ಊಟ ಹೀಗೆ ಅನೇಕ ಪದಗಳನ್ನು ಅನುಕರಿಸಿ ಮಾತನಾಡುತ್ತದೆ. ಹೀಗೆಯೆ ಮಾತನಾಡುತ್ತಾ ಆಡುತ್ತಾ ವರ್ಷ ಒಂದೂವರೆ ವರ್ಷಗಳು ತುಂಬುವ ವೇಳೆಗೆ ತೊದಲು ನುಡಿಗಳು ಸ್ಪಷ್ಟ ಉಚ್ಚಾರಣೆಯನ್ನು ಪಡೆಯ ತೊಡಗುತ್ತವೆ. ಮತ್ತೆ ಕೆಲವು ದಿನಗಳು ಕಳೆದಂತೆ ಸ್ಪಷ್ಟವೂ, ನಿರ್ದಿಷ್ಟವೂ ಆದ ರೂಪನ್ನ ಪಡೆಯುತ್ತವೆ. ಆಗ ಮಗುವಿಗೆ ಭಾಷೆ ಸಂಪೂರ್ಣವಾಗಿ ದಕ್ಕಿರುತ್ತದೆ.

ಭಾಷೆಯು ದೈವದತ್ತವಾದುದಾಗಿದ್ದರೆ ಜಗತ್ತಿನಾದ್ಯಂತ ಒಂದೇ ತೆರನಾಗಿ ಇರಬೇಕಾಗಿತ್ತು. ಆದರೆ ಈಗ ಭಾಷೆಯು ದೇಶ ಹಾಗೂ ಪ್ರಾಂತ್ಯ ಭೇದಗಳನ್ನು ಹೊಂದಿದೆ. ಅಂದರೆ ಒಂದು ನಿರ್ದಿಷ್ಟ ಭೂ ಪ್ರದೇಶದ ಜನರಾಡುವ ಭಾಷೆಗೂ, ಇನ್ನೊಂದು ಪ್ರದೇಶದ ಜನರಾಡುವ ಭಾಷೆಗೂ ಅಜಗಜಾಂತರ ವ್ಯತ್ಯಾಸ, ಭಿನ್ನತೆ, ಬಗೆ-ಬಗೆಯ ವೈವಿಧ್ಯತೆಗಳು ಇವೆ. ಪ್ರಪಂಚದಲ್ಲಿ ಇಂದು ಸಾವಿರಾರು ಭಾಷೆಗಳು ಹಾಗೂ ಉಪಭಾಷೆಗಳು ಚಲಾವಣೆಯಲ್ಲಿ ಇವೆ. ಈ ಎಲ್ಲವೂ ಒಂದೇ ಮೂಲಭಾಷೆಯಿಂದ ಜನಿಸಿ ಕವಲೊಡೆದಿರಬಹುದು ಅಥವಾ ಬೇರೆ ಬೇರೆಯಾಗಿಯೆ ಜನಿಸಿ ಬೆಳವಣಿಗೆ ಹೊಂದಿರಬಹುದು. ಈ ಎರಡು ಸಾಧ್ಯತೆಗಳು ಕೂಡ ಇವೆ ಎಂದು ವಿದ್ವಾಂಸರು ಊಹಿಸಿದ್ದಾರೆ.

ಇಂದು ಜಗತ್ತಿನಾದ್ಯಂತ ಇರುವ ಭಾಷೆಗಳನ್ನು ಇಂತಿಷ್ಟೇ ಎಂದು ನಿರ್ದಿಷ್ಟ ಸಂಖ್ಯೆಯಲ್ಲಿ ಹೇಳುವುದಕ್ಕೆ ಸಾಧ್ಯವಿಲ್ಲ. ಈಗ ಇರುವ ಭಾಷೆಗಳಲ್ಲಿ ಕೆಲವು ಸ್ವತಂತ್ರ ಭಾಷೆಗಳಿವೆ. ಮತ್ತೆ ಕೆಲವು ಉಪಭಾಷೆಗಳಿವೆ. ಕೆಲವು ಮಾತಿನೊಂದಿಗೆ ಲಿಪಿಯನ್ನು ಹೊಂದಿದ್ದರೆ ಇನ್ನು ಕೆಲವು ಲಿಪಿಯಿಲ್ಲದೆ ಕೇವಲ ಆಡುಮಾತಿನಿಂದ ಕೂಡಿವೆ. ಅಂತೆಯೇ ಇಂದಿಗೂ ಕೂಡ ಯಾರ ಗಮನಕ್ಕೂ ಬಾರದ ಅನೇಕ ಭಾಷೆ ಮತ್ತು ಉಪಭಾಷೆಗಳು ಜಗತ್ತಿನಲ್ಲಿ ಇವೆ ಎಂಬುದು ಕೂಡ ಸತ್ಯವಾದ ವಿಚಾರವಾಗಿದೆ.

ಜಗತ್ತಿನಲ್ಲಿರುವ ಭಾಷೆಗಳ ಸಂಖ್ಯೆಯನ್ನು ನಿರ್ದಿಷ್ಟವಾಗಿ, ನಿಖರವಾಗಿ ಹೇಳಲಾಗದಿದ್ದರೂ ಕೆಲವು ವಿದ್ವಾಂಸರು ಅಂದಾಜಿನ ಮೂಲಕ ಭಾಷೆಗಳ ಸಂಖ್ಯೆಯನ್ನು ನೀಡಿದ್ದಾರೆ. ಅವರುಗಳ ಪ್ರಕಾರ ಭಾರತದಲ್ಲಿ ಮೂರು ಸಾವಿರಕ್ಕೂ ಅಧಿಕ ಭಾಷೆ ಹಾಗೂ ಉಪಭಾಷೆಗಳಿವೆ. ಅಮೇರಿಕಾದಲ್ಲಿ ಒಂದೂವರೆ ಸಾವಿರಕ್ಕೂ ಅಧಿಕ ಭಾಷೆ ಹಾಗೂ ಉಪಭಾಷೆಗಳಿವೆ. ಆಫ್ರಿಕಾದಲ್ಲಿ ಏಳು ನೂರಕ್ಕೂ ಅಧಿಕ ಭಾಷೆ, ಉಪಭಾಷೆಗಳಿವೆ ಎಂದು ಅನೇಕ ರಾಷ್ಟ್ರಗಳಲ್ಲಿ ಇರುವ ಭಾಷೆ ಹಾಗೂ ಉಪಭಾಷೆಗಳ ಅಂದಾಜು ಪಟ್ಟಿಯನ್ನು ನೀಡಿದ್ದಾರೆ. ವಿದ್ವಾಂಸರ ಈ ಅಂದಾಜಿಗೆ ಕೆಲವೊಂದು ಆಧಾರಗಳು ದೊರೆತಿವೆ. ಆದರೂ ಈ ಅಂದಾಜು ಲೆಕ್ಕಾಚಾರವೆ ಅಂತಿಮವಲ್ಲ. ವಿದ್ವಾಂಸರ ಲೆಕ್ಕಕ್ಕೆ ಸಿಗದ ಸಾವಿರಾರು ಭಾಷೆಗಳು ಅಜ್ಞಾತವಾಗಿಯೆ ಜಗತ್ತಿನಲ್ಲಿ ಇವೆ ಎಂಬುದಂತೂ ಸ್ಪಷ್ಟ.

ನಮ್ಮ ವಿಶಾಲ ಭಾರತದೇಶ ಬಗೆಬಗೆಯ ವೈವಿಧ್ಯತೆಗಳಿಂದ ಕೂಡಿದೆ. ಇಲ್ಲಿನ ಹವಾಮಾನ, ಪರಿಸರ, ಭೌಗೋಳಿಕ ಲಕ್ಷಣಗಳು, ಜನಜೀವನ, ಕಲೆ-ಸಂಸ್ಕೃತಿ, ಆಚಾರ-ವಿಚಾರಗಳು ಈ ಎಲ್ಲವುಗಳಲ್ಲಿಯೂ ಕೂಡ ಹಲವು ತೆರನಾದ ಭಿನ್ನತೆಯನ್ನು ಹೊಂದಿವೆ. ಹಾಗಾಗಿ ಇಲ್ಲಿನ ಒಂದು ಪ್ರದೇಶದ ಜನಬದುಕಿಗಿಂತ ಇನ್ನೊಂದು ಪ್ರದೇಶದ ಬದುಕು ವೈವಿಧ್ಯಮಯವಾಗಿದೆ. ಇಂಥ ಹಲವು ಹತ್ತು ವೈವಿಧ್ಯಮಯ ಪ್ರದೇಶಗಳು ಭಾರತದಲ್ಲಿ ಇವೆ. ಆಯಾ ಪ್ರಾದೇಶಿಕತೆಗನುಗುಣವಾಗಿ ಅಲ್ಲಿನ ಜನಬದುಕು ರೂಪಗೊಂಡಿದೆ.

ಈ ನಮ್ಮ ದೇಶದಲ್ಲಿ ಭೌಗೋಳಿಕ, ಸಾಂಸ್ಕೃತಿಕ ವೈವಿಧ್ಯದಂತೆ ಭಾಷಾ ವೈವಿಧ್ಯತೆಯೂ ಕೂಡಾ ಇದೆ. ಇದು ಬಹು ಭಾಷೆಗಳ ತವರಾಗಿದೆ. ಈ ಮೊದಲೆ ಹೇಳಿರುವಂತೆ ಇಲ್ಲಿ ಮೂರು ಸಾವಿರಕ್ಕೂ ಅಧಿಕ ಭಾಷೆ ಮತ್ತು ಉಪಭಾಷೆಗಳು

ಇವೆ. ಈ ಒಂದೊಂದು ಭಾಷೆ ಕೂಡ ತನ್ನದೆ ಆದ ಸ್ವಂತಿಕೆ, ವೈಶಿಷ್ಟ್ಯತೆಗಳನ್ನು ಒಳಗೊಂಡು ಸಮೃದ್ಧವಾಗಿದೆ.

ಭಾರತದಲ್ಲಿರುವ ಎಲ್ಲ ಭಾಷೆಗಳನ್ನು ನಾಲ್ಕು ಪ್ರಮುಖ ಭಾಷಾ ಪರಿವಾರಗಳಲ್ಲಿ ವಿಂಗಡಿಸಲಾಗಿದೆ. ಆ ಭಾಷಾ ಪರಿವಾರಗಳೆಂದರೆ ;

1. ಆರ್ಯನ್ ಭಾಷಾ ಪರಿವಾರ
2. ದ್ರಾವಿಡ ಭಾಷಾ ಪರಿವಾರ
3. ಆಸ್ಟ್ರಿಕ್ ಭಾಷಾ ಪರಿವಾರ
4. ಟಿಬೇಟೊ–ಬರ್ಮನ್ ಭಾಷಾ ಪರಿವಾರ

ಇವುಗಳಾಗಿವೆ. ಈ ನಾಲ್ಕು ಭಾಷಾ ಪರಿವಾರಗಳಿಂದ ಕವಲೊಡೆದು ಭಾರತದ ಎಲ್ಲ ಭಾಷೆಗಳು ಜನಿಸಿವೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಭಾರತದೇಶದಲ್ಲಿ ಮೂರು ಸಾವಿರ ಭಾಷೆ ಹಾಗೂ ಉಪಭಾಷೆಗಳು ಇದ್ದರೂ ಕೂಡ ನಮ್ಮ ಸಂವಿಧಾನದಲ್ಲಿ ಉಲ್ಲೇಖಿತವಾಗಿರುವ ಭಾಷೆಗಳ ಸಂಖ್ಯೆ ಕೇವಲ ಹದಿನೆಂಟು ಮಾತ್ರ. ಆ ಹದಿನೆಂಟು ಭಾಷೆಗಳೆಂದರೆ ಕನ್ನಡ, ತಮಿಳು, ತೆಲುಗು, ಮಲೆಯಾಳಂ, ಉರ್ದು, ಅಸ್ಸಾಮಿ, ಕಾಶ್ಮೀರಿ, ಕೊಂಕಣಿ, ಗುಜರಾತಿ, ನೇಪಾಳಿ, ಪಂಜಾಬಿ, ಬಂಗಾಳಿ, ಮರಾಠಿ, ಮಣಿಪುರಿ, ಹಿಂದಿ, ಸಂಸ್ಕೃತ ಹಾಗೂ ಸಿಂಧಿ, ಒರಿಯಾ ಇವುಗಳು. ಹಾಗೆಯೇ ನಮ್ಮ ಕೇಂದ್ರ ಸಾಹಿತ್ಯ ಅಕಾಡೆಮಿಯು 25 ಭಾಷೆಗಳನ್ನು ಮಾನ್ಯ ಮಾಡಿದೆ. ನಮ್ಮ ಸಂವಿಧಾನ ಉಲ್ಲೇಖಿಸಿರುವ ಮೇಲ್ಕಂಡ ಹದಿನೆಂಟು ಭಾಷೆಗಳ ಜೊತೆಗೆ ಇಂಗ್ಲೀಷ್, ಡೋಗ್ರಿ, ಟಿಬೇಟಿಯನ್, ದೇವನಾಗರಿ, ಪಾಳಿ, ಮೈಥಿಲಿ ಹಾಗೂ ರಾಜಸ್ಥಾನಿ ಭಾಷೆಗಳು ಸೇರಿವೆ.

ಈ ಭಾಷೆಗಳು ಭಾರತದ ಪ್ರಮುಖ ಭಾಷೆಗಳೆಂದು ತೀರ್ಮಾನಿಸಲಾಗಿದೆ. ಈ ಎಲ್ಲ ಭಾಷೆಗಳೂ ಕೂಡ ಅಪಾರ ಸಂಖ್ಯೆಯ ಜನರ ಸಂವಹನ ಮಾಧ್ಯಮಗಳಾಗಿವೆ. ಇವುಗಳಲ್ಲಿ ಅಪಾರವಾದ ಸಾಹಿತ್ಯ ಸಂಪತ್ತು ಬೆಳವಣಿಗೆ ಹೊಂದಿದೆ. ಈ ಪ್ರಮುಖ ಭಾಷೆಗಳಲ್ಲಿ ಕೆಲವನ್ನು ಕುರಿತಂತೆ ಒಂದು ಸಂಕ್ಷಿಪ್ತ ಪರಿಚಯವನ್ನು ಈ ಮುಂದೆ ನೋಡೋಣ.



# ಕನ್ನಡ

ಕನ್ನಡವು ಕನ್ನಡಿಗರ ತಾಯ್ನುಡಿ. ಅಖಂಡ ಕರ್ನಾಟಕದ ಆಡಳಿತ ಭಾಷೆ. ಈ ಭಾಷೆಯನ್ನು ಕರ್ನಾಟಕದ ಸುಮಾರು ನಾಲ್ಕೂವರೆ ಕೋಟಿಗೂ ಅಧಿಕ ಜನರು ಮಾತನಾಡುತ್ತಾರೆ. ಈ ಭಾಷೆಯನ್ನಾಡುವ ಜನ ಕೇವಲ ಕರ್ನಾಟಕವಲ್ಲಿ ಮಾತ್ರವೆ ಅಲ್ಲದೆ ಭಾರತದಾದ್ಯಂತ ಅನೇಕ ಪ್ರಮುಖ ನಗರಗಳಲ್ಲಿ ವಾಸಿಸು ತ್ತಿದ್ದಾರೆ.

ಕನ್ನಡವು ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಭಾಷೆ. ದ್ರಾವಿಡ ಭಾಷೆ ಗಳಲ್ಲಿಯೆ ಎರಡನೆಯ ಪ್ರಾಚೀನ ಭಾಷೆ ಕೂಡ ಹೌದು. ಇದು ಕ್ರಿ. ಪೂ. ಆರನೆಯ ಶತಮಾನಕ್ಕಿಂತಲೂ ಪೂರ್ವದಲ್ಲಿಯೆ ಬಳಕೆಯಲ್ಲಿತ್ತೆಂದು ವಿದ್ವಾಂಸರು ಊಹಿಸಿದ್ದಾರೆ. ಆದರೆ ಅಧಿಕೃತ ಆಧಾರಗಳು ದೊರೆಯುವುದು ಕ್ರಿ. ಶ. 450 ರಿಂದ ಇತ್ತೀಚೆಗೆ ಹಲ್ಮಿಡಿ ಶಾಸನದಿಂದ. ಈ ಶಾಸನದ ಕಾಲಕ್ಕಾಗಲೆ ಕನ್ನಡವು ಒಂದು ಸಮೃದ್ಧ ಭಾಷೆಯಾಗಿ ಬೆಳೆದಿತ್ತು ಎಂಬುದು ನಿರ್ವಿವಾದವಾದ ಅಂಶವಾಗಿದೆ.

ಕನ್ನಡ ನಾಡು ಮತ್ತು ನುಡಿಯ ಪ್ರಾಚೀನತೆಯನ್ನು ಕ್ರಿಸ್ತಶಕದ ಆರಂಭದಿಂದಲೆ ಗುರುತಿಸುವುದಕ್ಕೆ ಅನೇಕ ಅಧಿಕೃತ ಆಧಾರಗಳು ದೊರೆಯುತ್ತವೆ. ಅನೇಕ ಪ್ರಾಕೃತ ಹಾಗೂ ಸಂಸ್ಕೃತದ ಮೊದಮೊದಲ ಗ್ರಂಥಗಳಲ್ಲಿ ಕನ್ನಡ ಶಬ್ದಕ್ಕೆ ಸಂವಾದಿಯಾಗಿ ಕರ್ನಾಟ, ಕರ್ಣಾಟ, ಕರ್ನಾಟಕ, ಕರ್ಣಾಟಕ, ಕಂನಾಡು, ಕನ್ನಾಡು. ಈ ಮೊದಲಾದ ಪದಗಳು ದೊರೆಯುತ್ತವೆ. ಇವುಗಳಿಂದಲೆ ಕನ್ನಡ ಎಂಬ ಪದವು ನಿಶ್ಪತ್ತಿಯಾಗಿದೆ. ಈ ಪ್ರದೇಶವನ್ನು ಕರ್‌ನಾಡು, ಕರುನಾಡು, ಕರ್‌ನಾಟು ಈ ಮೊದಲಾಗಿ ಕರೆಯುತ್ತಿದ್ದರೆಂದು, ಆ ಪರಿಣಾಮವಾಗಿಯೆ ಕನ್ನಡ ಶಬ್ದ ಜನಿಸಿದೆ ಎಂದು ಕೂಡ ಹೇಳಲಾಗುತ್ತಿದೆ. ಕ್ರಿ. ಶ. ಎರಡನೆಯ ಶತಮಾನದ ಶೆಡ್ಯೆಯಾನ್ ಪರಾಂತಕ ಎಂಬುವನ "ವೇಳ್ವಿಕುಡಿ" ತಾಮ್ರಶಾಸನದಲ್ಲಿ ಹಾಗೂ "ಶಿಲಪ್ಪದಿಕಾರಂ" ಎಂಬ ಪ್ರಾಚೀನ ತಮಿಳು ಗ್ರಂಥದಲ್ಲಿ ಕರುನಾಡು, ಕರುನಾಡಿಗನ್ ಎಂಬ ಪದಗಳು ದೊರೆತಿವೆ. ವೇಳ್ವಿಕುಡಿ ತಾಮ್ರಶಾಸನವು ಪಾಂಡ್ಯ ರಾಜವಂಶದವರ ಶಾಸನವಾಗಿದೆ. ಈ

ಆಧಾರಗಳಿಂದ ಕನ್ನಡ ನಾಡು ಹಾಗೂ ನುಡಿಗಳು ಬಹಳ ಪ್ರಾಚೀನವಾದವು ಎಂಬ ಅಂಶ ವೇದ್ಯವಾಗುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯು ಅಧಿಕೃತವಾಗಿ ಕ್ರಿ. ಶ. ಒಂಬತ್ತನೆ ಶತಮಾನದಿಂದ ಆರಂಭವಾಗುತ್ತದೆ. ಇದಕ್ಕೂ ಪೂರ್ವದಲ್ಲಿ ಕನ್ನಡ ನುಡಿಯು ಶಾಸನಗಳಲ್ಲಿ ಬಳಕೆಯಾಗಿದೆ. ಕ್ರಿ. ಶ. 450ರ ಹಲ್ಮಿಡಿ ಶಾಸನ ಹಾಗೂ ಕ್ರಿ. ಶ. 700ರ ಬಾದಾಮಿ ಶಾಸನಗಳಲ್ಲಿ ಕನ್ನಡದ ಬಳಕೆ ಇದೆ.

ಕನ್ನಡದಲ್ಲಿ ದೊರೆತಿರುವ ಮೊಟ್ಟಮೊದಲ ಸಾಹಿತ್ಯ ಕೃತಿಯೆಂದರೆ "ಕವಿರಾಜಮಾರ್ಗ". ಇದು ಕ್ರಿ. ಶ. ಎಂಟನೆಯ ಶತಮಾನದ ಅಂತ್ಯ ಭಾಗದಲ್ಲಿ ರಚಿತವಾಗಿದೆ. ಇದರ ಕರ್ತೃ ರಾಷ್ಟ್ರಕೂಟ ದೊರೆ ಶ್ರೀ ವಿಜಯ ಎಂಬುವನು ಇದೊಂದು ಲಾಕ್ಷಣಿಕ ಗ್ರಂಥ. ಇದರಲ್ಲಿ ಕನ್ನಡ ನಾಡಿನ ವಿಸ್ತಾರ, ಕನ್ನಡನಾಡಿನ ವೈಭವದ ವರ್ಣನೆಗಳಿವೆ. ಈ ಕೃತಿಯ ನಂತರ ದೊರೆತಿರುವ ಕೃತಿ. ಶಿವಕೋಟ್ಯಾಚಾರ್ಯ ಎಂಬುವನು ರಚಿಸಿರುವ "ವಡ್ಡಾರಾಧನೆ" ಎಂಬ ಗದ್ಯ ಗ್ರಂಥವಾಗಿದೆ. ಇದರ ರಚನೆಯ ಕಾಲ ಕ್ರಿ. ಶ. 940 ಇದೊಂದು ಜೈನ ಧಾರ್ಮಿಕ ಗ್ರಂಥ . ಇದರಲ್ಲಿ ಜೈನರ ಭಾವಾವಳಿಗನ್ನೊಳಗೊಂಡ ಹತ್ತೊಂಬತ್ತು ಕಥೆಗಳಿವೆ. ಈ ಕೃತಿಯಲ್ಲಿ ಬಹಳ ಸತ್ವಯುತವಾದ ಭಾಷೆಯ ಬಳಕೆಯಿರು ವುದನ್ನು ಕಾಣಬಹುದಾಗಿದೆ. ಹಾಗೇಯೆ ಉತ್ತಮವಾದ ಕಥನ ಶೈಲಿಯಿದೆ. ಇದಕ್ಕೂ ಮೊದಲೆ ಕನ್ನಡದಲ್ಲಿ ಅಸಗ, ಗುಣನಂದಿ ಹಾಗೂ ಗುಣವರ್ಮ ಎಂಬ ಕವಿಗಳು ಸಾಹಿತ್ಯ ರಚನೆ ಮಾಡಿದ್ದಾರೆ ಎಂದು ಹೇಳುತ್ತಾರೆ. ಆದರೆ ಅವಕ್ಕೆ ಯಾವುದೆ ಖಚಿತ ಆಧಾರಗಳಿಲ್ಲ.

ಕನ್ನಡ ಸಾಹಿತ್ಯ ಬಹಳ ಫಲಪ್ರಧವಾಗಿ, ಸಮೃದ್ಧವಾಗಿ ಬೆಳೆದು ಬಂದದ್ದು ಕ್ರಿ.ಶ. 941 ರ ನಂತರ ಪಂಪ ನಿಂದ "ಪಂಪ" ಕನ್ನಡದ ಅಗ್ರಮಾನ್ಯ ಕವಿ ಇವನನ್ನು ಕನ್ನಡದ ರತ್ನತ್ರಯರಲ್ಲಿ ಮೊದಲಿಗ ಎಂದು ಕರೆಯುತ್ತಾರೆ. ಈತನ ಕೈಯ್ಯಲ್ಲಿ ಕನ್ನಡ ಭಾಷೆಯು ಬಹಳ ಸತ್ವಯುತವಾಗಿ ಬೆಳವಣಿಗೆ ಹೊಂದಿತು. ಈತನು ಒಬ್ಬ ಜೈನ ಕವಿಯಾದರೂ ಕೂಡ "ವಿಕ್ರಮಾರ್ಜುನ ವಿಜಯ" ಅಥವ "ಪಂಪಭಾರತ" ಎಂಬ ತುಂಬಾ ಶ್ರೇಷ್ಠವಾದ ಲೌಕಿಕ ಕಾವ್ಯವನ್ನು ರಚಿಸಿದ್ದಾನೆ. ಈ ಗ್ರಂಥವು ಇರ್ದೇ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಂದಿಗೂ ಕೂಡ ಬಹಳ ಉದ್ದಾಮ ಗ್ರಂಥ ಎಂದು ಪರಿಗಣಿಸಲ್ಪಟ್ಟಿದೆ. ಈತ ರಚಿಸಿರುವ ಇನ್ನೊಂದು ಮಹತ್‌ಗ್ರಂಥ ಆದಿಪುರಾಣ ಇದು ಜೈನ ಧಾರ್ಮಿಕ ಕೃತಿಯಾಗಿದೆ.

ಪಂಪನ ನಂತರದ ಕನ್ನಡದ ಮತ್ತೊಬ್ಬ ಶ್ರೇಷ್ಠ ಕವಿ ರನ್ನ. ಈತನ ಕಾಲ ಕ್ರಿ.ಶ.949 ಹೆಚ್ಚು ಕಡಿಮೆ ಈತನೂ ಪಂಪನ ಸಮಕಾಲೀನ. ಇವನನ್ನು ಕನ್ನಡ ಕವಿಚಕ್ರವರ್ತಿ ಎಂದು ಕರೆಯುತ್ತಾರೆ. ಇವನೊಬ್ಬ ಶ್ರೇಷ್ಠಕವಿಯಾಗಿ ಅಜಿತಪುರಾಣ, ಸಾಹಾಸಭೀಮವಿಜಯ ಅಥವ ಗದಾಯುದ್ಧ, ರನ್ನಕಂದ, ಚಕ್ರೇಶ್ವರ ಚರಿತ್ರೆ, ಪರುಶುರಾಮಚರಿತೆ ಈ ಮುಂತಾದ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಗದಾಯುದ್ಧ ಕೃತಿಯು ಕನ್ನಡ ಸಾಹಿತ್ಯದ ಅನರ್ಘ್ಯ ರತ್ನವೆನಿಸಿದೆ. ಇದು ನಾಟಕದ ಶೈಲಿಯಲ್ಲಿ ರಚಿತವಾಗಿದೆ.

ಈತನ ನಂತರದ ಶ್ರೇಷ್ಠಕವಿ ಪೊನ್ನ. ಇವನ ಕಾಲ ಕ್ರಿ. ಶ. 969 ಇವನು ಶಾಂತಿಪುರಾಣ ಹಾಗೂ ಜಿನಾಕ್ಷರಮಾಲೆ ಎಂಬ ಎರಡು ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾನೆ.

ಪೊನ್ನನ ನಂತರದ ಕನ್ನಡದ ಶ್ರೇಷ್ಠಕವಿಗಳಲ್ಲಿ ಚಾವುಂಡರಾಯ, ಮೊದಲನೆಯ ನಾಗವರ್ಮ, ದುರ್ಗಸಿಂಹ, ಶಾಂತಿನಾಥ, ಚಂದ್ರರಾಜ, ಕೀರ್ತಿವರ್ಮ, ನಾಗಚಂದ್ರ, ನಯಸೇನ, ಬ್ರಹ್ಮಶಿವ ಈ ಮೊದಲಾದವರು ಮುಖ್ಯರಾಗುತ್ತಾರೆ. ಚಾವುಂಡರಾಯನು ಗಂಗರಾಜರ ದಂಡನಾಯಕನಾಗಿ ಕವಿ ಹಾಗೂ ಕಲಿ ಎರಡೂ ಆಗಿದ್ದವನು. ಅವನು "ತ್ರಿಷಷ್ಠಿ ಲಕ್ಷಣ ಮಹಾಪುರಾಣ" ಎಂಬ ಶ್ರೇಷ್ಠ ಕೃತಿಯನ್ನು ರಚಿಸಿದ್ದಾನೆ. ನಾಗವರ್ಮನು "ಕರ್ನಾಟಕ ಕಾದಂಬರಿ ಕಥೆ" ಎಂಬ ಸುಂದರವೂ, ಸುಮಧುರವೂ ಆದ ಪ್ರೇಮಕಾವ್ಯವನ್ನು ರಚಿಸಿದ್ದಾನೆ. ನಾಗಚಂದ್ರನು ರಾಮಚಂದ್ರ ಚರಿತ ಪುರಾಣ ಹಾಗೂ ಮಲ್ಲಿನಾಥಪುರಾಣಗಳನ್ನು ರಚಿಸಿ ಕನ್ನಡ ಭಾಷೆಯನ್ನು ಬೆಳೆಸಿದ್ದಾನೆ. ಹಾಗೆಯೆ ನಯಸೇನನು ಧರ್ಮಾಮೃತ ಬ್ರಹ್ಮಶಿವನು ಸಮಯ ಪರೀಕ್ಷೆ ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

ಈ ನಂತರದ ಕಾಲಘಟ್ಟದಲ್ಲಿ ಅಂದರೆ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನೆ ಮೊದಲಾದ ಶರಣರಿಂದ ಬಹಳ ಶ್ರೇಷ್ಠವೂ, ಸರಳವೂ, ಸಮೃದ್ಧವೂ ಆದ ವಚನ ಸಾಹಿತ್ಯವು ಬೆಳೆದು ಬಂದಿತು. ಈ ಸಾಹಿತ್ಯವು ಒಂದು ಕ್ರಾಂತಿಕಾರಕ ಘಟ್ಟವಾಗಿ ಕನ್ನಡದ ನೆಲದಲ್ಲಿ ಬೆಳೆದು ಬಂದಿತು. ಬಸವಣ್ಣ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ, ಸಿದ್ಧರಾಮ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಕಾಳವ್ವ ಈ ಮೊದಲಾದ ವಿವಿಧ ಜಾತಿ-ಧರ್ಮ ವರ್ಗಗಳಿಂದ ಬಂದಂತಹ ಕಾಯಕ ನಿಷ್ಠರಾದ ಶಿವಶರಣರು ಬಹಳ ಅಪರೂಪದ ಸಾಹಿತ್ಯ ಸಂಪತ್ತನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದರು.

ವಚನ ಸಾಹಿತ್ಯದ ನಂತರದ ಕಾಲಘಟ್ಟದಲ್ಲಿ ಹರಿಹರ, ರಾಘವಾಂಕ, ಭೀಮಕವಿ, ನೇಮಿಚಂದ್ರ, ರುದ್ರಭಟ್ಟ, ಆಂಡಯ್ಯ, ಜನ್ನ ಕುಮಾರವ್ಯಾಸ ಈ ಮೊದಲಾದವರು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅತ್ಯುತ್ತಮವಾದ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಹರಿಹರನ ರಗಳೆಗಳು, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಭೀಮಕವಿಯ ಬಸವಪುರಾಣ, ನೇಮಿಚಂದ್ರನ ನೇಮಿನಾಥಪುರಾಣ, ರುದ್ರಭಟ್ಟನ ಜಗನ್ನಾಥ ವಿಜಯ, ಆಂಡಯ್ಯನ ಕಬ್ಬಿಗರ ಕಾವ್ಯ, ಚಾಮರಸನ ಪ್ರಭುಲಿಂಗಲೀಲೆ, ಜನ್ನನ ಯಶೋಧರಚರಿತೆ, ಕುಮಾರ ವ್ಯಾಸನ ಕರ್ಣಾಟ ಭಾರತ ಕಥಾಮಂಜರಿ ಈ ಎಲ್ಲ ಕೃತಿಗಳೂ ಕೂಡ ಕನ್ನಡ ಸಾಹಿತ್ಯದ ಅಮೂಲ್ಯ ಸಂಪತ್ತಾಗಿವೆ.

ಈ ನಂತರ ಹದಿನೈದು ಮತ್ತು ಹದಿನಾರನೆ ಶತಮಾನದಲ್ಲಿ ಬೆಳೆದು ಬಂದ ದಾಸ ಸಾಹಿತ್ಯವಂತೂ ಕನ್ನಡದ ಕಣ್ಣಾಗಿದೆ. ನರಹರಿತೀರ್ಥ, ಶ್ರೀಪಾದರಾಯ, ಪುರಂದರದಾಸ, ಕನಕದಾಸ, ಈ ಎಲ್ಲ ದಾಸಶ್ರೇಷ್ಠರು ರಚಿಸಿದ ಕೀರ್ತನೆಗಳು, ಉಗಾಭೋಗಗಳು ಹಾಗೂ ಕಾವ್ಯಕೃತಿಗಳು ಬಹಳ ಮಹತ್ವ ಪೂರ್ಣವಾದವುಗಳಾಗಿವೆ. ನಂತರದ ರತ್ನಾಕರವರ್ಣಿ, ಮೈಸೂರು ಸಂಸ್ಥಾನದ ಕವಿಗಳಾದ ಚಿಕ್ಕದೇವರಾಜ ಒಡೆಯ, ತಿರುಮಲಾರ್ಯ, ಸಿಂಗಿರಾರ್ಯ. ಶೃಂಗಾರಮ್ಮ, ಸಂಚಿಯ ಹೊನ್ನಮ್ಮ ಇವರ ಸಾಹಿತ್ಯವೂ ಕೂಡ ಅತ್ಯಮೂಲ್ಯ ವಾದುದಾಗಿದೆ. ರತ್ನಾಕರವರ್ಣಿಯ 'ಭರತೇಶ ವೈಭವ', ಚಿಕ್ಕದೇವರಾಜರ 'ಚಿಕ್ಕದೇವರಾಜ ಬಿನ್ನಪ' ಸಿಂಗಿರಾರ್ಯನ 'ಮಿತ್ರವಿಂದಾಗೋವಿಂದ' ಎಂಬ ಕನ್ನಡದ ಪ್ರಥಮ ನಾಟಕ ಹಾಗೇಯೆ ಸಂಚಿಯ ಹೊನ್ನಮ್ಮನ 'ಹದಿಬದೆಯ ಧರ್ಮ' ಶೃಂಗಾರಮ್ಮನ 'ಪದ್ಮಿನಿ ಕಲ್ಯಾಣ' ಈ ಎಲ್ಲ ಕೃತಿಗಳೂ ಕೂಡ ಗಮ ನಾರ್ಹವಾದವುಗಳೇ ಆಗಿವೆ.

ಮುಂದಿನ ಕಾಲಘಟ್ಟದ ಷಡಕ್ಷರದೇವನ ಕೃತಿಗಳು, ಅನುಭಾವಿ ಕವಿ ಸರ್ವಜ್ಞನ ವಚನಗಳು, ಕೆಂಪುನಾರಾಯಣ, ಮುದ್ದಣ ಈ ಮೊದಲಾದವರ ಕೃತಿಗಳು ಕನ್ನಡ ಸಾಹಿತ್ಯದ ಅಮೂಲ್ಯ ಆಸ್ತಿಯಾಗಿವೆ.

ಕ್ರಿ. ಶ. ಒಂಬತ್ತನೆಯ ಶತಮಾನದಲ್ಲಿ ಆರಂಭಗೊಂಡ ಕನ್ನಡ ಸಾಹಿತ್ಯವು ಅವ್ಯಾಹತವಾಗಿ ಬೆಳೆದು ಕ್ರಿ. ಶ. 19ನೇ ಶತಮಾನದ ವೇಳೆಗೆ ಆಧುನಿಕತೆಯತ್ತ ಕಾಲಿಟ್ಟಿತು. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹಂತಗಳನ್ನು

ದಾಟಿ ಹೊಸಗನ್ನಡ ಎಂಬುದಾಗಿ ಬೆಳೆಯತೊಡಗಿತು. ವಸಾಹಾತುಶಾಹಿ ಪ್ರಭಾವ ಹಾಗೂ ಪ್ಪಾಶ್ಚಾತ್ಯ ಚಿಂತನೆಗಳಿಗಿಂತ ಪ್ರಭಾವಿತವಾಗಿ ಬೆಳೆದ ಈ ಸ್ಸಾಹಿತ್ಯವು ನವೋದಯ ಎಂಬ ಪಂಥವಾಗಿ ಬೆಳೆಯುತ್ತ ಕನ್ನಡ ಸಾಹಿತ್ಯವಾಹಿನಿಗೆ ಒಂದು ಹೊಸ ತಿರುವನ್ನು ನೀಡಿತು. ಈ ಕಾಲಘಟ್ಟದಲ್ಲಿ ಕನ್ನಡದ ಕಣ್ವ ಎಂದು ಹೆಸರಾದ ಬಿ. ಎಂ. ಶ್ರೀಕಂಠಯ್ಯ, ರಾಷ್ಟ್ರಕವಿ ಗೋವಿಂದ ಪೈ, ಪಂಜೆ ಮಂಗೇಶರಾಯರು, ರಾಷ್ಟ್ರಕವಿ ಕುವೆಂಪು, ಶಿವರಾಮಕಾರಂತ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ದತ್ತಾತ್ರೇಯ ರಾಮಚಂದ್ರಬೇಂದ್ರೆ ಈ ಮೊದಲಾದವರು ಕವಿತೆ, ಕಾದಂಬರಿ, ನಾಟಕ, ಸಣ್ಣಕತೆ, ಅನುವಾದಗಳು, ಪ್ರವಾಸ ಕಥನಗಳು, ಪ್ರಬಂಧಗಳು ಈ ಎಲ್ಲ ವಿಭಿನ್ನ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿದರು. ಬಿ.ಎಂ.ಶ್ರೀಯವರು 'ಇಂಗ್ಲಿಷ್ ಗೀತೆಗಳು' ಎಂಬ ಕವಿತಾಸಂಕಲನ 'ಅಶ್ವತ್ಥಾಮನ್' ಎಂಬ ರುದ್ರನಾಟಕವನ್ನು ರಚಿಸಿದರು. ಗೋವಿಂದಪೈ ಅವರು 'ಗೋಲ್ಗೊಥಾ-ವೈಶಾಖಿ' ಮೊದಲಾದ ಕವನ ಸಂಕಲನಗಳನ್ನು ರಚಿಸಿದರು. ಪಂಜೆ ಮಂಗೇಶರಾಯರು ಕವಿಶಿಷ್ಯ ಎಂಬ ಕಾವ್ಯನಾಮದಿಂದ ಕವಿತೆಗಳನ್ನು, ಕತೆಗಳನ್ನು ರಚಿಸಿದರು. ರಾಷ್ಟ್ರಕವಿ ಕುವೆಂಪು ಅವರು ಅನೇಕ ಕವನಸಂಕಲನಗಳನ್ನು, ನಾಟಕಗಳನ್ನು ರಚಿಸಿದರು. 'ಮಲೆಗಳಲ್ಲಿ ಮದುಮಗಳು', 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಎಂಬ ಕಾದಂಬರಿಗಳನ್ನು ರಚಿಸಿದರು. ಜೊತೆಗೆ ಆಧುನಿಕ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ' ಕೃತಿಯನ್ನು ರಚಿಸಿ ಜ್ಞಾನಪೀಠ ಪ್ರಶಸ್ತಿಯನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವರ 'ಕಲಾಸುಂದರಿ', 'ಅಗ್ನಿಹಂಸ', 'ಪ್ರೇಮಕಾಶ್ಮೀರ', 'ಪಾಂಚಜನ್ಯ', 'ಅನಿಕೇತನ', 'ಕೊಳಲು', 'ಪಕ್ಷಿಕಾಶಿ', 'ನವಿಲು' ಈ ಮೊದಲಾದ ಕವನ ಸಂಕಲನಗಳು ಅತ್ಯುತ್ತಮವಾದವುಗಳಾಗಿವೆ. 'ರಕ್ತಾಕ್ಷಿ', 'ಜಲಗಾರ', 'ಬೆರಳ್ಗೆ ಕೊರಳ್', 'ಶೂದ್ರ ತಪಸ್ವಿ' ಮೊದಲಾದವು ಶ್ರೇಷ್ಠ ನಾಟಕಗಳಾಗಿವೆ.

ಶಿವರಾಮಕಾರಂತರು ಆಧುನಿಕ ಕನ್ನಡ ಕಾದಂಬರಿಯ ದಿಗ್ಗಜರಾಗಿದ್ದಾರೆ. ಇವರು ನಲವತ್ತಕ್ಕೂ ಅಧಿಕ ಕಾದಂಬರಿಗಳನ್ನು ರಚಿಸಿದ್ದಾರೆ. 'ಚೋಮನದುಡಿ', 'ಸರಸಮ್ಮನ ಸಮಾಧಿ', 'ಬೆಟ್ಟದ ಜೀವ', 'ಕುಡಿಯರ ಕೂಸು', 'ಮರಳಿ ಮಣ್ಣಿಗೆ' ಹಾಗೂ ಜ್ಞಾನಪೀಠ ಪ್ರಶಸ್ತಿ ಪಡೆದ ಕಾದಂಬರಿಯಾದ 'ಮೂಕಜ್ಜಿಯ ಕನಸುಗಳು' ಈ ಮೊದಲಾದವುಗಳು ಶ್ರೇಷ್ಠಕೃತಿಗಳಾಗಿವೆ. ಬೇಂದ್ರೆಯವರು ಶ್ರೇಷ್ಠಕವಿಯಾಗಿ 'ಕೃಷ್ಣಕುಮಾರಿ', 'ಗರಿ', 'ನಾದಲೀಲೆ, 'ಸಖೀಗೀತ', 'ಜೀವಲಹರಿ' ಹಾಗೂ

ಜ್ಞಾನಪೀಠ ಪ್ರಶಸ್ತಿ ಪಡೆದ 'ನಾಕುತಂತಿ' ಈ ಮೊದಲಾದ ಕವನ ಸಂಕಲನಗಳನ್ನು ರಚಿಸಿದ್ದಾರೆ. ಜೊತೆಗೆ ನಾಟಕಗಳು, ಕಥೆಗಳು, ವಿಮರ್ಶಾ ಲೇಖನಗಳನ್ನು ಕೂಡಾ ರಚಿಸಿದ್ದಾರೆ. ಮಾಸ್ತಿಯವರು ಆಧುನಿಕ ಸಣ್ಣಕತೆಗಳ ಜನಕ ಎಂದೇ ಪ್ರಸಿದ್ಧರಾಗಿದ್ದಾರೆ. ಹಲವಾರು ಕತೆಗಳನ್ನು ರಚಿಸಿದ್ದಾರೆ. ಇವರ ಚಿಕ್ಕವೀರರಾಜೇಂದ್ರ ಕಾದಂಬರಿಗೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ.

ಹೊಸಗನ್ನಡ ಸಾಹಿತ್ಯದ ಎರಡನೆಯ ಘಟ್ಟ ಪ್ರಗತಿಶೀಲ ಸಾಹಿತ್ಯ. ಇದು ಕ್ರಿ. ಶ. 1940 ರಿಂದ ಆರಂಭವಾಗುತ್ತವೆ. ಈ ಕಾಲಘಟ್ಟದಲ್ಲಿ ಅತ್ಯುತ್ತಮ ಸಣ್ಣಕತೆಗಳು ಹಾಗೂ ಕಾದಂಬರಿಗಳು ಬೆಳೆದು ಬಂದಿವೆ. ಅ. ನ. ಕೃಷ್ಣರಾಯ, ನಿರಂಜನ, ತ.ರಾ.ಸು, ಬಸವರಾಜ ಕಟ್ಟೀಮನಿ ಈ ಮುಂತಾದವರು ಈ ಪಂಥದ ಲೇಖಕರಾಗಿ ಉತ್ತಮ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಅ.ನ.ಕೃಷ್ಣರಾಯರು ಕಾದಂಬರಿ ಸಾರ್ವಭೌಮ ಎಂದೇ ಖ್ಯಾತರಾಗಿ ಸುಮಾರು ತೊಂಬತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದಿದ್ದಾರೆ. ಇವರ 'ಸಂಧ್ಯಾರಾಗ' 'ಉದಯರಾಗ', 'ಅಪರಾಜಿತೆ', 'ಈಚಲು ಮರದವ್ವ', 'ನಟಸಾರ್ವಭೌಮ' 'ಮಣ್ಣಿನ ದೋಣಿ', 'ಭಾಗ್ಯದ ಬಾಗಿಲು', 'ಶನಿಸಂತಾನ', 'ನಗ್ನಸತ್ಯ' ಈ ಮೊದಲಾದ ಸಾಮಾಜಿಕ ಕಾದಂಬರಿಗಳು ಕನ್ನಡ ಸಾಹಿತ್ಯದ ಅಮೂಲ್ಯ ಸಂಪತ್ತಾಗಿದೆ. ಜೊತೆಗೆ ಇವರು ಅನೇಕ ಐತಿಹಾಸಿಕ ಕಾದಂಬರಿಗಳನ್ನು, ನಾಟಕಗಳನ್ನೂ ಕೂಡಾ ರಚಿಸಿದ್ದಾರೆ. ನಿರಂಜನ ಅವರು ಪ್ರಗತಿಶೀಲ ಸಾಹಿತ್ಯ ಚಳುವಳಿಯ ನೇತಾರರಾಗಿ 'ಚಿರಸ್ಮರಣೆ', 'ಮೃತ್ಯುಂಜಯ', 'ವಿಮೋಚನೆ' 'ವಿಶಾಲಾಕ್ಷಿ', 'ಕೊನೆಯ ನಮಸ್ಕಾರ' ಈ ಮೊದಲಾದ ಕಾದಂಬರಿಗಳನ್ನೂ, 'ನಾವು ಮನುಷ್ಯರು', 'ಸಂಗಮಸ್ನಾನ', 'ಪಾಪಸ್ಸುಕಳ್ಳಿ' ಈ ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ತ.ರಾ.ಸು ಅವರು ಕೂಡಾ ಶ್ರೇಷ್ಠ ಕಾದಂಬರಿಕಾರರಾಗಿದ್ದಾರೆ. ಇವರು 'ಸಿಡಿಲ ಮೊಗ್ಗು', 'ರಕ್ತರಾತ್ರಿ', 'ದುರ್ಗಾಸ್ತಮಾನ', 'ನೃಪತುಂಗ', 'ಕಸ್ತೂರಿ ಕಂಕಣ' ಈ ಮೊದಲಾದ ಐತಿಹಾಸಿಕ ಕಾದಂಬರಿಗಳನ್ನು ಹಾಗೂ 'ಬಿಡುಗಡೆಯ ಬೇಡಿ', 'ಮಸಣದ ಹೂ', 'ಮನೆಗೆ ಬಂದ ಮಹಾಲಕ್ಷ್ಮಿ', 'ನಾಗರಹಾವು', 'ಚಂದವಳ್ಳಿಯ ತೋಟ' ಈ ಮುಂತಾದ ಸಾಮಾಜಿಕ ಕಾದಂಬರಿಗಳನ್ನು ಬರೆದಿದ್ದಾರೆ. ಅನೇಕ ನಾಟಕಗಳೂ ಹಾಗೂ ಸಣ್ಣಕತೆಗಳನ್ನು ಕೂಡಾ ಇವರು ಬರೆದಿದ್ದಾರೆ.

ಬಸವರಾಜ ಕಟ್ಟೀಮನಿ ಅವರು 'ಮೋಹದ ಬಲೆಯಲ್ಲಿ', 'ಜರತಾರಿ ಜಗದ್ಗುರು', 'ಜ್ವಾಲಾಮುಖಿಯ ಮೇಲೆ' ಈ ಮೊದಲಾದ ಕಾದಂಬರಿಗಳನ್ನು ಹಾಗೂ ಆಗಸ್ಟ್ ಒಂಬತ್ತು, ಕಾರವಾನ್, ಸುಂಟರ ಗಾಳಿ ಮೊದಲಾದ ಕಥಾ ಸಂಕಲನಗಳನ್ನು ಬರೆದಿದ್ದಾರೆ.

ಹೊಸಗನ್ನಡದ ಮೂರನೆಯ ಘಟ್ಟ ನವ್ಯಸಾಹಿತ್ಯ ಘಟ್ಟ. ಈ ಕಾಲಘಟ್ಟದಲ್ಲಿ ಕೂಡ, ಗೋಪಾಲಕೃಷ್ಣ ಅಡಿಗ, ವಿ. ಕೃ. ಗೋಕಾಕ್, ಪೂರ್ಣಚಂದ್ರತೇಜಸ್ವಿ, ಯು. ಆರ್. ಅನಂತಮೂರ್ತಿ, ಯಶವಂತಚಿತ್ತಾಲ, ಶಾಂತಿನಾಥ ದೇಸಾಯಿ, ಕೆ. ವಿ. ತಿರುಮಲೇಶ್ ಈ ಮುಂತಾದವರು ಉತ್ತಮ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ಅಡಿಗರು 'ಕಟ್ಟುವೆವು ನಾವು', 'ಚಂಡಮದ್ದಳೆ', 'ಭೂಮಿಗೀತ', 'ಬತ್ತಲಾರದ ಗಂಗೆ', 'ಚಿಂತಾಮಣಿಯಲ್ಲಿ ಕಂಡಮುಖ' ಮೊದಲಾದ ಕವನ ಸಂಕಲನಗಳನ್ನು ಹಾಗೂ 'ಆಕಾಶದೀಪ', 'ಅನಾಥೆ' ಈ ಮೊದಲಾದ ಕಾದಂಬರಿಗಳನ್ನು ರಚಿಸಿದ್ದಾರೆ. ಗೋಕಾಕರು - 'ಪಯಣ', 'ಬಾಳದೇಗುಲದಲ್ಲಿ', 'ದ್ಯಾವ-ಪೃಥ್ವಿ', 'ಸಮುದ್ರ ಗೀತೆಗಳು' ಮೊದಲಾದ ಕವನ ಸಂಕಲನಗಳನ್ನು 'ಇಜ್ಜೋಡು', 'ಸಮರಸವೇ ಜೀವನ' ಮೊದಲಾದ ಕಾದಂಬರಿಗಳನ್ನು 'ಭಾರತ ಸಿಂಧೂರಶ್ಮಿ' ಎಂಬ ಮಹಾಕಾವ್ಯವನ್ನು ರಚಿಸಿದ್ದಾರೆ. ತೇಜಸ್ವಿಯವರು 'ಕರ್ವಾಲೋ', 'ಯಮಳಪ್ರಶ್ನೆ', 'ಚಿದಂಬರ ರಹಸ್ಯ' ಮುಂತಾದ ಕಾದಂಬರಿಗಳನ್ನು 'ಅಬಚೂರಿನ ಪೋಸ್ಟಾಫೀಸು' ಮುಂತಾದ ಕಥಾಸಂಕಲನಗಳನ್ನು ರಚಿಸಿದ್ದಾರೆ. ಚಿತ್ತಾಲರು 'ಶಿಕಾರಿ', 'ಛೇದ', 'ಮೂರುದಾರಿಗಳು', 'ಪುರುಷೋತ್ತಮ' ಈ ಮುಂತಾದ ಕಾದಂಬರಿಗಳನ್ನು ರಚಿಸಿದ್ದಾರೆ. 'ಕತೆಯಾದಳು ಹುಡುಗಿ', 'ಆಂಬೊಲಿನ ಆಟ' ಮುಂತಾದ ಕಥಾಸಂಕಲನಗಳನ್ನು ರಚಿಸಿದ್ದಾರೆ. ಶಾಂತಿನಾಥದೇಸಾಯಿ ಅವರು 'ಮುಕ್ತಿ', 'ವಿಕ್ಷೇಪ','ಸೃಷ್ಟಿ', 'ಬೀಜ' ಎಂಬ ಕಾದಂಬರಿಗಳನ್ನು ಹಾಗೂ 'ಮಂಜುಗೆಡ್ಡೆ', 'ಕ್ಷಿತಿಜ', 'ದಂಡೆ' ಈ ಮುಂತಾದ ಕಥಾಸಂಕಲನಗಳನ್ನು ರಚಿಸಿದ್ದಾರೆ. ತಿರುಮಲೇಶರು 'ವಠಾರ', 'ಮುಖವಾಡಗಳು', 'ಮುಖಾಮುಖಿ' ಈ ಮುಂತಾದ ಕವನಸಂಕಲನಗಳು ಹಾಗೂ 'ಕಳ್ಳಿಗಿಡದ ಹೂ', 'ಬಾಗುವಾ ಮತ್ತು ಇತರರು' ಮೊದಲಾದ ಕಥಾಸಂಕಲನಗಳನ್ನು ರಚಿಸಿದ್ದಾರೆ.

ಹೊಸಗನ್ನಡದ ನಾಲ್ಕನೆಯ ಘಟ್ಟ ದಲಿತ-ಬಂಡಾಯ ಘಟ್ಟ. ಈ ಘಟ್ಟದಲ್ಲಿಯೂ ಕೂಡಾ ಸಮೃದ್ಧ ಸಾಹಿತ್ಯದ ಫಸಲನ್ನು ಕಾಣುತ್ತೇವೆ.

ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ, ಕಾಳೇಗೌಡ ನಾಗವಾರ, ಕುಂ. ವೀರಭದ್ರಪ್ಪ, ಚನ್ನಣ್ಣವಾಲೀಕಾರ್, ಸಾರಾಅಬೂಬಕ್ಕರ್, ಎಲ್. ಹನುಮಂತಯ್ಯ, ಅರವಿಂದ ಮಾಲಗತ್ತಿ, ಈ ಮುಂತಾದವರು ಅತ್ಯುತ್ತಮವಾದ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ.

ದೇವನೂರು ಮಹಾದೇವ ಅವರು ಶ್ರೇಷ್ಠ ಸಣ್ಣಕತೆಗಾರರಾಗಿ 'ದ್ಯಾವನೂರು' ಹಾಗೂ 'ಒಡಲಾಳ' ಎಂಬ ಕಥಾ ಸಂಕಲನಗಳನ್ನು 'ಕುಸುಮಬಾಲೆ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ಸಿದ್ಧಲಿಂಗಯ್ಯನವರು 'ಹೊಲೆಮಾದಿಗರ ಹಾಡು','ಸಾವಿರಾರು ನದಿಗಳು', 'ಕಪ್ಪುಕಾಡಿನ ಹಾಡು' ಎಂಬ ಕವನ ಸಂಕಲನಗಳನ್ನು ರಚಿಸಿದ್ದಾರೆ. 'ಪಂಚಮ', 'ನೆಲಸಮ' ಹಾಗೂ 'ಏಕಲವ್ಯ' ಎಂಬ ನಾಟಕಗಳನ್ನೂ, 'ಅವತಾರಗಳು', 'ಹಕ್ಕಿನೋಟ' ಎಂಬ ಪ್ರಬಂಧ ಸಂಕಲನಗಳನ್ನು ಕೂಡಾ ರಚಿಸಿದ್ದಾರೆ. ಬೆಸಗರಹಳ್ಳಿ ರಾಮಣ್ಣ ಅವರು 'ನೆಲದ ಒಡಲು', 'ಹರಕೆಯ ಹಣ', 'ಗರ್ಜನೆ', 'ಒಂದು ಹುಡುಗನಿಗೆ ಬಿದ್ದ ಕನಸು' ಮೊದಲಾದ ಕಥಾಸಂಕಲನಗಳನ್ನು ರಚಿಸಿದ್ದಾರೆ. ಬರಗೂರು ರಾಮಚಂದ್ರಪ್ಪನವರು 'ನೆತ್ತರಲ್ಲಿ ನೆಂದ ಹೂ', 'ಗುಲಾಮಗೀತೆ', 'ಕಾಂಟೆಸ್ಸಾದಲ್ಲಿ ಕಾವ್ಯ' ಮೊದಲಾದ ಕವನ ಸಂಕಲನಗಳನ್ನು 'ಸೂತ್ರ', 'ಉಕ್ಕಿನಕೋಟೆ', 'ಒಂದು ಊರಿನ ಕಥೆ' ಮೊದಲಾದ ಕಾದಂಬರಿಗಳನ್ನು 'ಕಪ್ಪುನೆಲ, ಕೆಂಪುಕಾಲು', 'ಬಯಲಾಟದ ಭೀಮಣ್ಣ' ಈ ಮುಂತಾದ ಕಥಾ ಸಂಕಲನಗಳನ್ನೂ ರಚಿಸಿದ್ದಾರೆ. ಕಾಳೇಗೌಡ ನಾಗವಾರ ಅವರು 'ಕರಾವಳಿಯಲ್ಲಿ ಗಂಗಾಲಗ್ನ', 'ಕನ್ನೆಯ ಸ್ನೇಹ' ಎಂಬ ಕವನ ಸಂಕಲನಗಳನ್ನು 'ಅಲೆಗಳು', 'ಈ ಮಂಜಿನೊಳಗೆ', 'ಬೆಟ್ಟಸಾಲು ಮಳೆ' ಎಂಬ ಕಥಾ ಸಂಕಲನಗಳನ್ನೂ ರಚಿಸಿದ್ದಾರೆ. ಅರವಿಂದ ಮಾಲಗತ್ತಿಯವರು 'ಮೂಕನಿಗೆ ಬಾಯಿ ಬಂದಾಗ', 'ಕಪ್ಪುಕಾವ್ಯ' ಎಂಬ ಕವನ ಸಂಕಲನಗಳನ್ನೂ 'ಕಾರ್ಯ' ಎಂಬ ಕಾದಂಬರಿಯನ್ನು 'ಗೌರ್ಮೆಂಟ್ ಬ್ರಾಹ್ಮಣ' ಎಂಬ ಆತ್ಮಕಥೆಯನ್ನು ಬರೆದಿದ್ದಾರೆ. ವಾಲೀಕಾರರು 'ಬಂಡೆದ್ದ ದಲಿತರ ಬೀದಿ ಹಾಡುಗಳು', 'ಧಿಕ್ಕಾರದ ಹಾಡುಗಳು' ಮೊದಲಾದ ಕವನ ಸಂಕಲನಗಳನ್ನು 'ಕಪ್ಪುಕಥೆಗಳು' ಮೊದಲಾದ ಕಥಾ ಸಂಕಲನಗಳನ್ನ ಹೊರತಂದಿದ್ದಾರೆ. ಸಾರಾ ಅಬೂಬಕರರು 'ಚಂದ್ರಗಿರಿಯ ತೀರದಲ್ಲಿ', 'ತಳ ಒಡೆದ ದೋಣಿಯಲ್ಲಿ', 'ಸಹನಾ' ಈ ಮೊದಲಾದ

ಕಾದಂಬರಿಗಳನ್ನೂ 'ಚಪ್ಪಲಿಗಳು' 'ಪಯಣ' ಮೊದಲಾದ ಕಥಾ ಸಂಕಲನಗಳನ್ನು ರಚಿಸಿದ್ದಾರೆ.

ಈ ಎಲ್ಲ ಕಾಲಘಟ್ಟದಲ್ಲಿಯೂ ಕನ್ನಡ ಸಾಹಿತ್ಯವು ಸಮೃದ್ಧವಾಗಿ ಬೆಳೆದಿದೆ. ಇಷ್ಟೊಂದು ಸಮೃದ್ಧ ಸಾಹಿತ್ಯ ಹೊಂದಿರುವ ಕನ್ನಡ ಭಾಷೆಯೂ ಕೂಡ ಹಲವಾರು ಹಂತಗಳಲ್ಲಿ ಬೆಳೆದಿದೆ. ಧಾರವಾಡ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಎಂಬ ಪ್ರಾಂತ್ಯಭೇದಗಳನ್ನೂ ಹೊಂದಿದೆ. ಬಡಗ, ಕೊಡಗು, ಸೋಲಿಗ, ಹವ್ಯಕ, ಕಾಡುಕುರುಬ ಮೊದಲಾದವು ಕನ್ನಡದ ಉಪಭಾಷೆಗಳಾಗಿವೆ.



# ತಮಿಳು

ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ತಮಿಳುಭಾಷೆಯು ಅತ್ಯಂತ ಪ್ರಾಚೀನ ಭಾಷೆ. ಭಾರತೀಯ ಭಾಷೆಗಳಲ್ಲಿ ಸಂಸ್ಕೃತವನ್ನು ಬಿಟ್ಟರೆ ಎರಡನೆಯ ಪ್ರಾಚೀನ ಹಾಗೂ ವಿಶಿಷ್ಟವಾದ ಭಾಷೆ ಈ ಭಾಷೆಯೇ ಆಗಿದೆ. ತಮಿಳುನಾಡಿನ ನಾಲ್ಕು ಕೋಟಿಗೂ ಅಧಿಕ ಜನರ ಮಾತೃಭಾಷೆಯಾಗಿರುವ ಇದಕ್ಕೆ ತುಂಬಾ ಪ್ರಾಚೀನವಾದ ಇತಿಹಾಸ ಹಾಗೂ ಸಾಹಿತ್ಯ ಚರಿತ್ರೆ ಇದೆ. ಇಷ್ಟೊಂದು ಪ್ರಾಚೀನ ಇತಿಹಾಸ ಹೊಂದಿದ ಹಾಗೂ ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ಮುಂದುವರೆದಿರುವ ಭಾಷೆ ಬೇರೊಂದಿಲ್ಲ.

ತಮಿಳು ಭಾಷೆಯನ್ನಾಡುವ ಅಪಾರ ಜನ ಭಾರತಾದ್ಯಂತ ಅನೇಕ ನಗರಗಳಲ್ಲಿ ಹರಡಿಕೊಂಡಿದ್ದಾರೆ. ಭಾರತದಲ್ಲಿಯೇ ಅಲ್ಲದೆ ಹೊರದೇಶಗಳಾದ ಶ್ರೀಲಂಕಾ, ಬರ್ಮ, ಮಲೇಶಿಯಾ, ಇಂಡೋನೇಷಿಯಾ, ವಿಯಟ್ನಾಂ, ದಕ್ಷಿಣ ಹಾಗೂ ಪೂರ್ವ ಆಫ್ರಿಕಾ, ಜರ್ಮನಿ, ಜಪಾನ್, ಚೀನಾ, ಜಾವಾ, ಫಿಜಿ, ಜಮೈಕಾ, ಲಕ್ಷದ್ವೀಪ, ಟ್ರೆನಿಡಾಸ್, ಮಡಗಾಸ್ಕರ್, ಮಾರಿಷಸ್, ಕೌಲಾಲಂಪುರ್ ಈ ಮುಂತಾದ ಕಡೆಗಳಲ್ಲಿಯೂ ತಮಿಳು ಮಾತನಾಡುವ ಬಹಳಷ್ಟು ಜನರಿದ್ದಾರೆ. ಅಮೇರಿಕಾ, ಇಂಗ್ಲೆಂಡ್, ಜರ್ಮನಿ, ಜಪಾನ್, ಫ್ರಾನ್ಸ್, ಮೊದಲಾದ ದೇಶಗಳ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳಲ್ಲಿ ತಮಿಳು ಭಾಷಾ ಅಧ್ಯಯನ ಕೇಂದ್ರಗಳಿವೆ. ಹಾಗಾಗಿ ಇದು ವಿಶ್ವದಾದ್ಯಂತ ಅಪಾರ ಜನಪ್ರಿಯತೆ ಗಳಿಸಿರುವ ಭಾಷೆಯಾಗಿದೆ.

ಕ್ರಿ. ಪೂ. ಒಂದನೆ ಶತಮಾನದಿಂದಲೆ ತಮಿಳು ಭಾಷೆಯ ಚರಿತ್ರೆ ಆರಂಭವಾಗುತ್ತದೆ. ಕ್ರಿ. ಪೂ. ಒಂದನೆಯ ಶತಮಾನದಲ್ಲಿ ತಮಿಳಿನ ಮೊಟ್ಟ ಮೊದಲ ಶಿಲಾಶಾಸನವು ಮಧುರೈ ಸಮೀಪದ ತನ್ನವೆಲ್ಲಿ ಎಂಬ ಊರಿನಲ್ಲಿ ದೊರೆತಿವೆ. ಇದರ ಆಧಾರದಿಂದ ಕ್ರಿ. ಪೂ. ಒಂದನೆಯ ಶತಮಾನಕ್ಕಿಂತ ಪೂರ್ವದಲ್ಲಿಯೆ ತಮಿಳು ಭಾಷೆಯು ಸಾಕಷ್ಟು ಸಮೃದ್ಧವಾಗಿ ಬೆಳೆದಿತ್ತು ಎಂಬುದು ತಿಳಿಯುತ್ತದೆ. ಕ್ರಿ. ಪೂ. ಒಂದನೇ ಶತಮಾನದ ನಂತರ ಅನೇಕ ಶಿಲಾಶಾಸನಗಳು ದೊರೆತಿವೆ.

ತಮಿಳಿನ ಸಾಹಿತ್ಯ ಚರಿತ್ರೆಯು ಕ್ರಿ. ಪೂ. ಐದನೆ ಶತಮಾನದಿಂದ ಆರಂಭವಾಗುತ್ತದೆ. "ತೊಳ್ಕಾಪಿಯಂ" ಎಂಬುದು ತಮಿಳಿನ ಮೊಟ್ಟ ಮೊದಲ ಗ್ರಂಥವಾಗಿದೆ. ಇದಕ್ಕಿಂತಲೂ ಪೂರ್ವದ ಯಾವುದೇ ಗ್ರಂಥವು ಇದುವರೆವಿಗೂ ದೊರೆತಿಲ್ಲ. ಈ ಕೃತಿಯಲ್ಲಿ ಮೂಲ ದ್ರಾವಿಡ ಭಾಷೆಯ ಅನೇಕ ಅಂಶಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಇದರ ರಚನೆಯ ಕಾಲ ಕ್ರಿ. ಪೂ. 450. ಇದೊಂದು ವ್ಯಾಕರಣ ಹಾಗೂ ಲಾಕ್ಷಣಿಕ ಗ್ರಂಥವಾಗಿದೆ. ಇದರಲ್ಲಿ ತಮಿಳಿನ ಪ್ರಾಚೀನ ರೂಪವು ದೊರೆಯುತ್ತದೆ. ಈ ತೊಳ್ಕಾಪಿಯಂ ಗ್ರಂಥವು ಕವಿಗಳಿಗೆ ಒಂದು ಕೈಪಿಡಿಯಂತಿದೆ. ಕವಿ, ಕಾವ್ಯಗಳನ್ನು ಕುರಿತಾದ ಅನೇಕ ಅಂಶಗಳ ಚರ್ಚೆ ಇದರಲ್ಲಿದೆ.

ತೊಳ್ಕಾಪಿಯಂ ಗ್ರಂಥದಿಂದ ಆರಂಭಗೊಂಡ ತಮಿಳು ಸಾಹಿತ್ಯವು ಅವ್ಯಾಹತವಾಗಿ ಮುಂದುವರೆದಿದೆ. ಆರಂಭ ಕಾಲದಲ್ಲಿಯೆ ಸಂಘಂ ಎಂಬ ಸಾಹಿತ್ಯ ಪಂಥವು ಇದರಲ್ಲಿ ಉದಯವಾಗಿದೆ. ಆ ಮೂಲಕವಾಗಿ ಪಂಚಮಹಾಕಾವ್ಯಗಳಾದ "ಶಿಲಪ್ಪದಿಗಾರಂ", 'ಮಣಿಮೇಖಲೈ", "ಚೂಡಾಮಣಿ" (ಜೀವಕ ಚಿಂತಾಮಣಿ), "ಕುಂಡಲಕೇಶಿ", "ವಳಯಾಪತಿ" ಇವುಗಳು ರಚನೆಯಾಗಿವೆ. ಉತ್ತಭಾರದ ಕಡೆಯಿಂದ ಬೌದ್ಧರು, ಹಾಗೂ ಜೈನರು ದಕ್ಷಿಣದತ್ತ ಬಂದು ಕಂಚಿ, ಮಧುರೆ ಈ ಮುಂತಾದ ಪ್ರಮುಖ ನಗರಗಳಲ್ಲಿ ನೆಲೆಸಿ ಸಂಸ್ಕೃತದ ಮಾದರಿಯಲ್ಲಿ ಈ ಗ್ರಂಥಗಳನ್ನು ರಚಿಸಿದ್ದಾರೆ ಎಂದು ಹೇಳಲಾಗಿದೆ.

ಶಿಲಪ್ಪದಿಗಾರಂ ಗ್ರಂಥವು ತಮಿಳಿನ ಬಹಳ ಪ್ರಮುಖ ಕೃತಿಯಾಗಿದೆ. ಇದನ್ನು ರಚಿಸಿದವರು ಇಳಂಗೋ ಅಡಿಗಳ್ ಎಂಬುವರು. ಮುಖ್ಯವಾಗಿ ಇದೊಂದು ಧಾರ್ಮಿಕ ಕೃತಿಯಾಗಿದ್ದು ಇದರಲ್ಲಿ ಪತಿವ್ರತಾ ಧರ್ಮಾಚರಣೆ, ವಿಧಿಲೀಲೆಗಳನ್ನು ಕುರಿತು ವಿವೇಚಿಸಲಾಗಿದೆ. ಇದರ ಕಥಾವಸ್ತುವು ಒಂದು ದುರಂತ ವಿಷಯವಾಗಿದ್ದು ಕರುಣಾಜನಕವಾಗಿದೆ. ಕೋವಲನ್ ಎಂಬುವನು ಈ ಕೃತಿಯ ಕಥಾನಾಯಕನಾಗಿದ್ದು ಅವನೊಬ್ಬ ಶ್ರೀಮಂತ ವರ್ತಕನಾಗಿರುತ್ತಾನೆ. ಇವನ ಹೆಂಡತಿ ಕಣ್ಣಿಕೆ. ಕೋವಲನ್ ಮಾಧವಿ ಎಂಬ ವೇಶ್ಯೆಯಲ್ಲಿ ಅನುರಕ್ತನಾಗುತ್ತಾನೆ. ಈ ವಿಷಯ ಹೆಂಡತಿಯಾದ ಕಣ್ಣಿಕೆಗೆ ತಿಳಿಯುತ್ತದೆ. ಆದರೂ ಆಕೆ ಗಂಡನನ್ನು ಕ್ಷಮಿಸುತ್ತಾಳೆ. ಕೊನೆಗೆ ಕೋವಲನ್ ವೇಶ್ಯೆಯ

ಸಹವಾಸದಿಂದ ಸರ್ವಸ್ವವನ್ನು ಕಳೆದುಕೊಳ್ಳುತ್ತಾನೆ. ಆಗ ಕನ್ನಿಕೆಯು ಗಂಡನಿಗೆ ತನ್ನ ಕಾಲಂದುಗೆಯನ್ನು ಕೊಡುತ್ತಾಳೆ. ಅವನು ಅದನ್ನು ಮಾರಲು ಮಧುರಾನಗರಕ್ಕೆ ಹೋಗುತ್ತಾನೆ. ಅಲ್ಲಿ ಮಾರುವಾಗ ರಾಜಭಟರು ಇದು ರಾಣಿಯ ಕಾಲಂದುಗೆ ಎಂದು ಸುಳ್ಳು ಆರೋಪದಿಂದ ಕೋವಲನ್‌ನನ್ನು ಬಂಧಿಸುತ್ತಾರೆ. ರಾಣಿಯ ಮುಂದೆ ಹಾಜರುಪಡಿಸಿದಾಗ ಆಕೆ ಹಿಂದೆ-ಮುಂದೆ ನೋಡದೆ ಕೋವಲನ್‌ಗೆ ಗಲ್ಲುಶಿಕ್ಷೆ ವಿಧಿಸುತ್ತಾಳೆ. ಕೋವಲನ್ ಸಾಯುತ್ತಾನೆ. ಇದರಿಂದ ಕನ್ನಿಕೆಯು ಇಡೀ ಮಧುರಾ ನಗರಕ್ಕೆ ಶಾಪ ಹಾಕುತ್ತಾಳೆ. ನಂತರ ಸಹಗಮನ ಹೊಂದುತ್ತಾಳೆ. ಕೊನೆಗೆ ಮಧುರಾ ನಗರವೆ ನಾಶವಾಗುತ್ತದೆ. ರಾಣಿಯರೂ ನಾಶವಾಗುತ್ತಾರೆ. ಆಗ ರಾಜನು ಕನ್ನಿಕೆಯ ಹೆಸರಿನಲ್ಲಿ ಒಂದು ದೇವಾಲಯವನ್ನು ನಿರ್ಮಿಸುತ್ತಾನೆ. ಇದು ಶಿಲಪ್ಪದಿಗಾರಂ ಕಾವ್ಯದ ಒಟ್ಟು ತಿರುಳಾಗಿದೆ. ಭಾಷೆಯ ಬಳಕೆ, ನಿರೂಪಣಾ ಶೈಲಿ, ಪಾತ್ರ ಚಿತ್ರಣ, ವರ್ಣನಾ ಕೌಶಲ್ಯ ಈ ಎಲ್ಲ ದೃಷ್ಟಿಯಿಂದ ಈ ಕಾವ್ಯವು ಅತ್ಯುತ್ತಮವಾಗಿದ್ದು ತಮಿಳಿನ ಅನರ್ಘ್ಯರತ್ನವಾಗಿದೆ.

ಮತ್ತೊಂದು ಮಹಾಕಾವ್ಯವಾದ ಮಣಿಮೇಖಲೈ ಗ್ರಂಥವು ಕೂಡ ತಮಿಳಿನ ಅತ್ಯುತ್ತಮ ಕೃತಿಯಾಗಿದೆ. ಇದರ ಕರ್ತೃ ಶೀತ್ತಲೈಚ್ಚಾತ್ತಿನಾರ್ ಎಂಬುವರು. ಇದರ ಕಥೆಯು ಒಂದು ರೀತಿಯಲ್ಲಿ ಶಿಲಪ್ಪದಿಗಾರಂನ ಮುಂದುವರೆದ ರೂಪದಂತಿದೆ. ಕೋವಲನ್‌ನ ಪ್ರೇಯಸಿಯಾದ ಮಾಧವಿ ಹಾಗೂ ಆಕೆಯ ಮಗಳಾದ ಮಣಿಮೇಖಲೆಯ ಕತೆ ಇದರಲ್ಲಿದೆ. ಇದರಲ್ಲಿ ಮಣಿಮೇಖಲೆಯು ದುಷ್ಟ ಜನರ ಕೈಯಿಂದ ತಪ್ಪಿಸಿಕೊಂಡು ಓಡಿಹೋಗಿ ಬೌದ್ಧ ಸನ್ಯಾಸಿಯಾಗುತ್ತಾಳೆ. ನಂತರ ಮಾಧವಿಯೂ ಕೂಡ ಮಗಳ ಜೊತೆ ಸೇರಿ ಸನ್ಯಾಸಿನಿಯಾಗುತ್ತಾಳೆ.

ಇನ್ನೊಂದು ಮಹಾಕಾವ್ಯವಾದ ಚೂಡಾಮಣಿ ಅಥವ ಜೀವಕ ಚಿಂತಾ ಮಣಿಯು ಒಂದು ಲೌಕಿಕ ಕಾವ್ಯವಾಗಿದೆ. ಇದೊಂದು ಜೈನ ಕೃತಿ ಯಾಗಿದ್ದು ಇದನ್ನು ತ್ತಿರುತ್ತಕ್ಕು ದೇವರ್ ಎಂಬ ಜೈನ ಸನ್ಯಾಸಿಯು ರಚಿಸಿದ್ದಾನೆ.

ಉಳಿದ ಎರಡು ಮಹಾಕಾವ್ಯಗಳಾದ ಕುಂಡಲಕೇಶಿ ಮತ್ತು ವಿಳಯಾಪತಿ ಗಳು ಈವರೆಗೆ ಉಪಲಬ್ಧವಾಗಿಲ್ಲ. ಎರಡನೆಯ ಕಾಲಘಟ್ಟದ ತಮಿಳು ಸಾಹಿತ್ಯದಲ್ಲಿ ಶೈವ ಮತ್ತು ವೈಷ್ಣವ ಭಕ್ತಿಪಂಥಗಳು ತಮ್ಮ ಪ್ರಾಬಲ್ಯವನ್ನು

ಸ್ಥಾಪಿಸಿದವು. ಈ ಕಾಲಘಟ್ಟದಲ್ಲಿಯೆ "ಪಾದಿರಪಟ್ಟು", "ಎಟ್ಟುತೊಗೈ" ಮೊದಲಾದ ಕೃತಿಗಳು ರಚನೆಯಾದವು. ಮತ್ತು ಅತ್ಯುತ್ತಮ ಗ್ರಂಥಗಳೆನಿಸಿದ "ಪುರನಾನೂರು", "ಆಗನಾನೂರು", "ನಾಟ್ರಿಸೈ", "ಕುರುಂತೋಗೈ", "ಪರಿಪಾಡಲ್", "ಆಯಂಗುರು" ಈ ಮುಂತಾದವುಗಳು ಕೂಡ ರಚನೆಯಾದವು. ತಮಿಳಿನ ಮತ್ತೊಂದು ಮಹಾಕಾವ್ಯ ಎನಿಸಿದ ಕಂಬರಾಮಾಯಣವು ರಚನೆಯಾಯಿತು. "ತಿರುಕ್ಕುರುಳ್" ಗ್ರಂಥವು ಕೂಡಾ ಹೆಚ್ಚು ಕಡಿಮೆ ಇದೆ ಕಾಲಘಟ್ಟದಲ್ಲಿ ರಚನೆಯಾಯಿತು.

ಶೈವಪಂಥದವರಾದ ನಾಯನಾರರು, ವೈಷ್ಣವರಾದ ಆಳ್ವಾರರು, ಅಪಾರವಾದ ಭಕ್ತಿಪ್ರಧಾನ ಕಾವ್ಯಗಳನ್ನು ರಚಿಸಿದರು. ನಂಬಿ ಅಂಡಾಳ್, ನಾಥಮುನಿ ಈ ಮುಂತಾದವರು ಭಕ್ತಿಗೀತೆಗಳನ್ನು ರಚಿಸಿದರು. ಅಪ್ಪರ್, ಸಂಬಂಧಿರ್ ಇವರುಗಳು ಅತ್ಯುತ್ತಮ ಭಕ್ತಿ ಕಾವ್ಯಗಳನ್ನು ರಚಿಸಿದರು. ನಮ್ಮಾಳ್ವರ್ ಹಾಗೂ ಮಧುರ ಇವರು ಅನುಭಾವಿ ಕವಿಗಳಾಗಿದ್ದರು. ಹಾಗೆಯೇ ಅನೇಕ ಪುರಾಣಗಳು, ಶತಕಗಳು ಕೂಡ ರಚನೆಯಾದವು. ತಿರುನಾವುಕ್ಕಸರ್, ಸುಂದರರ್ ಮತ್ತು ಮಾಣಿಕ್ಯವಾಚಕರ್ ಇವರುಗಳು ನಾಯನಾರರಲ್ಲಿ ಶ್ರೇಷ್ಟ ರಾಗಿದ್ದು ಅತ್ಯುತ್ತಮವಾದ ಸಾಹಿತ್ಯರಚನೆಯನ್ನು ಮಾಡಿದ್ದಾರೆ. ಆಳ್ವಾರರಲ್ಲಿ ಕುಲಶೇಖರ ಪ್ರಮುಖನಾಗಿದ್ದಾನೆ. ಈ ಎಲ್ಲರೂ ತಮಿಳಿನ ಭಕ್ತಿಸಾಹಿತ್ಯಕ್ಕೆ ನೀಡಿರುವ ಕೊಡುಗೆ ಅಸಾಮಾನ್ಯವಾದುದಾಗಿದೆ.

ತಮಿಳಿನ ಪ್ರಮುಖ ಕವಿ; ಅನುಭಾವಿಯಾದ ತಿರುವಳ್ಳುವರ್ ಎಂಬುವರು ರಚಿಸಿರುವ ತಿರುಕ್ಕುರುಳ್ ಗ್ರಂಥವು ಅತ್ಯಮೂಲ್ಯವಾದ ಗ್ರಂಥವಾಗಿದೆ. ವೆಣ್ಬಾ ಛಂದಸ್ಸಿನಲ್ಲಿ ರಚನೆಯಾಗಿರುವ ಗೀತೆಗಳು ಇದರಲ್ಲಿವೆ. ಇದೇ ತಿರುವಳ್ಳುವರ್ ರಚಿಸಿರುವ ಮತ್ತೊಂದು ಗ್ರಂಥವಾದ "ಕುರಳ್" ಎಂಬುದು ಕೂಡ ತಮಿಳಿನ ಅತ್ಯುತ್ತಮ ಕೃತಿಯಾಗಿದೆ. ಇದೊಂದು ಜ್ಞಾನಪರಿಪೂರ್ಣತೆಯನ್ನು ನೀಡುವ ಕೃತಿಯಾಗಿದೆ. ಜಾತಿಯತೆಯ ಉಗ್ರಖಂಡನೆ, ಮಾನವೀಯತೆ ಸಂದೇಶ ಸಾರುವುದು ಮತ್ತು ಜೀವನದ ಗಹನ ವಿಷಯಗಳನ್ನು ಕುರಿತಾದ ಚರ್ಚೆ ಇವುಗಳು ಈ ಕೃತಿಯ ತಿರುಳಾಗಿವೆ.

ಕ್ರಿ. ಶ. ಹದಿನೆಂಟನೆ ಶತಮಾನದ ವೇಳೆಗೆ ತಮಿಳಿನ ಮೇಲೆ ಪಾಶ್ಚಿಮಾತ್ಯ ಪ್ರಭಾವ ಬೀಳುತ್ತದೆ. ಪೋರ್ಚುಗೀಸರು, ಡಚ್ಚರು ಫ್ರೆಂಚರು ಹಾಗೂ ಇಂಗ್ಲೀಷರು ಈ ಮೊದಲಾದವರು ತಮ್ಮ ಅಪಾರ ಪ್ರಭಾವವನ್ನು ಬೀರುತ್ತಾರೆ.

ಪಾಶ್ಚಾತ್ಯ ವಿದ್ವಾಂಸರಾದ ಡಾ. ಕಾಲ್ಡ್‌ವೆಲ್, ವಿನ್ಸ್ಲೋ ಮೊದಲಾದವರು ತಮಿಳು ಭಾಷೆ ಮತ್ತು ಸಾಹಿತ್ಯವನ್ನು ಕುರಿತಂತೆ ಅಪಾರವಾದ ಸಂಶೋಧನೆಯನ್ನು ನಡೆಸಿದ್ದಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಆಧುನಿಕ ತಮಿಳು ಸಾಹಿತ್ಯವು ಆರಂಭವಾಗುತ್ತದೆ. ಪಾಶ್ಚಾತ್ಯರಿಂದ ಪ್ರೇರಣೆ ಪಡೆದ ಈ ಕಾಲಘಟ್ಟದ ಸಾಹಿತ್ಯವು ಕವನ, ಕಾದಂಬರಿ, ಸಣ್ಣಕತೆ, ನಾಟಕ, ಪ್ರಬಂಧ, ಪ್ರವಾಸ ಕಥನ, ಈ ಮೊದಲಾದ ಪ್ರಕಾರಗಳಲ್ಲಿ ಬೆಳೆದು ಬಂದಿದೆ. ಹಾಗೆಯೇ ಗಾಂಧೀಜಿಯವರ ಸ್ವಾತಂತ್ರ್ಯ ಚಳುವಳಿಯ ಪ್ರಭಾವ ಕೂಡ ಇದರ ಮೇಲೆ ಆಗಿದೆ. ಹಾಗಾಗಿ ಈ ಕಾಲಘಟ್ಟದ ಸಾಹಿತ್ಯವು ತುಂಬಾ ಶಕ್ತಿಯುತವಾಗಿಯೆ ಹೊರಹೊಮ್ಮಿದೆ. ಈ ಕಾಲದ ಕಾವ್ಯರಚನೆಯಲ್ಲಿ ಭಾರತಿ, ಕವಿಮಣಿ, ಸುಂದರಂ ಪಿಳ್ಳೆ, ಸೂರ್ಯ ನಾರಾಯಣ ಶಾಸ್ತ್ರಿ, ಸುಂದರಂ ಮೊದಲಿಯಾರ್, ಚಿದಂಬರಂ ಪಿಳ್ಳೆ, ಸ್ವಾಮಿ ವೇದಾಚಲಂ, ಡಾ. ಸ್ವಾಮಿನಾಥ ಅಯ್ಯರ್ ಮುಂತಾದವರು ತೊಡಗಿಕೊಂಡು ಅತ್ಯುತ್ತಮ ಕೃತಿಗಳನ್ನು ರಚಿಸಿದ್ದಾರೆ. ಹಾಗೆಯೇ ಮಹಿಳೆಯರಲ್ಲಿ ಅಂಬುಜ ಮ್ಮಾಳ್, ಸ್ವರ್ಣಾಂಬಳ್, ಕೊತ್ತನಾಯಕಿ ಅಮ್ಮಾಳ್ ಮೊದಲಾದವರು ಮುಖ್ಯರಾಗುತ್ತಾರೆ.

ತಮಿಳಿನ ಕಾದಂಬರಿ ಕ್ಷೇತ್ರವು ತುಂಬಾ ವಿಶಾಲವಾಗಿದ್ದು ಅಪಾರವಾದ ಕೃತಿಗಳು ರಚನೆಯಾಗಿವೆ. ಮೊದಮೊದಲು ಅನುವಾದಿತ ಕಾದಂಬರಿಗಳು ಬಂದರೂ ಕೂಡಾ ನಂತರ ಸ್ವತಂತ್ರ ಕಾದಂಬರಿಗಳು ರಚನೆಯಾಗಿವೆ. ಸುಬ್ರಮಣ್ಯಭಾರತಿ, ಸುಂದರಂಪಿಳ್ಳೆ, ವೇದ ನಾಯಕ ಪಿಳ್ಳೆ, ರಾಜಮಯ್ಯರ್, ಆರಣಿ ಕುಪ್ಪುಸ್ವಾಮಿ, ಕು. ಪ. ರಾಜಗೋಪಾಲನ್, ಕಲ್ಕಿ, ಕೃಷ್ಣಮೂರ್ತಿ, ಮಾಧವಯ್ಯ ಮೊದಲಾದವರು ಸರ್ವಶ್ರೇಷ್ಠ ಕಾದಂಬರಿಗಳನ್ನು ರಚಿಸಿದ್ದಾರೆ.

ಸಣ್ಣಕಥೆಗಳು ಕೂಡ ಸಾಕಷ್ಟು ಪ್ರಮಾಣದಲ್ಲಿಯೇ ಬೆಳವಣಿಗೆಯನ್ನು ಹೊಂದಿದ್ದು ಸುಬ್ರಮಣ್ಯ ಭಾರತಿ, ಎಸ್. ಪಿ. ಅಯ್ಯರ್ ಮೊದಲಾದವರು ಒಳ್ಳೆಯ ಕತೆಗಳನ್ನು ರಚಿಸಿದ್ದಾರೆ. ತಮಿಳಿನ ನಾಟಕ ರಂಗಕ್ಕೆ ಬಂದರೆ ಅದು ಕೂಡ ಫಲಪ್ರದವಾಗಿಯೆ ಬೆಳೆದಿದೆ. ಇವುಗಳ ಜೊತೆಗೆ ವಿಮರ್ಶೆ, ವಿಜ್ಞಾನ ಸಾಹಿತ್ಯ, ವಿಚಾರ ಸಾಹಿತ್ಯವೂ ಕೂಡ ತಮಿಳಿನಲ್ಲಿ ಬೆಳವಣಿಗೆಯನ್ನು ಹೊಂದಿದೆ.

ಇತ್ತೀಚಿನ ತಮಿಳು ಸಾಹಿತಿಗಳಲ್ಲಿ ಕುಲೋತ್ತುಂಗನ್, ಕ. ನಾ. ಸುಬ್ರಮಣ್ಯ, ಚಲ್ಲಪ್ಪ, ನೀಲ ಪದ್ಮನಾಭನ್, ಅಖಿಲನ್, ಜಯಕಾಂತನ್,

ಸುಂದರರಾಮಸ್ವಾಮಿ, ಅಶೋಕ ಮಿತ್ರನ್, ಇಂದಿರಾ ಪಾರ್ಥಸಾರಥಿ ಮೊದಲಾದವರು ಮುಖ್ಯರಾಗಿದ್ದಾರೆ.

ತಮಿಳು ಸಾಹಿತ್ಯವು ಕ್ರಿ. ಪೂ. ಮೂರನೆಯ ಶತಮಾನದಿಂದ ಇಂದಿನವರೆವಿಗೂ ಅಪಾರವಾದ ಬೆಳವಣಿಗೆಯೊಂದಿಗೆ ಮುಂದುವರೆಯುತ್ತಿದೆ. ಈ ಸಾಹಿತ್ಯದ ಬೆಳವಣಿಗೆಯಿಂದ ತಮಿಳು ಭಾಷೆಯು ಸಮೃದ್ಧವಾಗಿದೆ. ಅನೇಕ ರೂಪಾಂತರಗಳಲ್ಲಿ ಬೆಳವಣಿಗೆ ಹೊಂದಿದೆ. ಈ ಭಾಷೆಗೆ ಯರಕುಲ, ಕೈಕಾಡಿ, ಯರವ, ಪರವ, ಮಲೆಕುಡಿ, ಪಣಿಯ, ಬುರಗುಂಡಿ ಮುಂತಾದವುಗಳು ಉಪಭಾಷೆಗಳಾಗಿವೆ. ತುಂಬಾ ಸುಂದರ ಹಾಗೂ ಸುಮಧುರ ಭಾಷೆ ಎಂಬ ಅಭಿಧಾನವು ತಮಿಳು ಭಾಷೆಗೆ ಇದೆ.



# ತೆಲುಗು

ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ತೆಲುಗು ಭಾಷೆಯು ಆಂಧ್ರ ಪ್ರದೇಶದ ಆಡಳಿತ ಭಾಷೆಯಾಗಿದೆ. ಆಂಧ್ರದ ಸುಮಾರು ನಾಲ್ಕೂವರೆ ಕೋಟಿಗೂ ಅಧಿಕ ಜನರ ಮಾತೃಭಾಷೆಯಾಗಿದೆ. ಇದು ಕೇವಲ ಆಂಧ್ರದಲ್ಲಿ ಮಾತ್ರವಲ್ಲದೆ ಭಾರತಾದ್ಯಂತ ಅನೇಕ ಕಡೆಗಳಲ್ಲಿ ಪ್ರಚಲಿತವಾಗಿದೆ.

ಪ್ರಾಚೀನತೆಯ ದೃಷ್ಟಿಯಿಂದ ಈ ಭಾಷೆಯು ದ್ರಾವಿಡ ಭಾಷೆಗಳಲ್ಲಿ ಮೂರನೆ ಸ್ಥಾನವನ್ನು ಪಡೆದಿದೆ. ಆದರೆ ಮಾತನಾಡುವ ಜನರ ಸಂಖ್ಯೆಯಿಂದ ಪ್ರಥಮ ಸ್ಥಾನವನ್ನು ಪಡೆದಿದೆ. ತೆಲುಗು ಭಾಷೆಯ ಚರಿತ್ರೆಯು ಕ್ರಿ. ಶ. 575ರಿಂದ ಆರಂಭವಾಗುತ್ತದೆ. ಈ ಕಾಲದಲ್ಲಿ ರಚನೆಯಾಗಿರುವ ಕಳಮಳ್ಳ ಧನಂಜಯನ ಶಿಲಾಶಾಸನವೇ ತೆಲುಗಿನ ಅತೀ ಪ್ರಾಚೀನ ಮತ್ತು ಮೊಟ್ಟಮೊದಲ ಶಾಸನವಾಗಿದೆ. ಇದಕ್ಕಿಂತಲೂ ಸಾಕಷ್ಟು ಮೊದಲೆ ತೆಲುಗು ಭಾಷೆಯು ಸಮೃದ್ಧವಾಗಿ ಬೆಳೆದಿರಲೇಬೇಕು.

ಕೆಲವು ಜನರು ಕ್ರಿ. ಶ. 630ರ ಸುಮಾರಿನಲ್ಲಿ ರಚನೆಯಾಗಿರುವ ರೇಣುಪಟ್ಟಿಯ ಮುತ್ತುರಾಜುಲು ಶಿಲಾಶಾಸನವೆ ತೆಲುಗಿನ ಪ್ರಥಮ ಶಾಸನವೆಂದು ವಾದಿಸುತ್ತಾರೆ. ಆದರೆ ಕಳಮಳ್ಳ ಧನಂಜಯನ ಶಾಸನವೆ ಪ್ರಥಮಶಾಸನ ಎಂಬುದಕ್ಕೆ ವಿದ್ವಾಂಸ ಒಮ್ಮತ ಇದೆ.

ತೆಲುಗಿನ ಸಾಹಿತ್ಯಚರಿತ್ರೆಯು ಕ್ರಿ. ಶ. ಹನ್ನೊಂದನೆಯ ಶತಮಾನದಿಂದ ಆರಂಭವಾಗುತ್ತದೆ. ಈ ಕಾಲದಲ್ಲಿ ರಚಿತವಾಗಿರುವ "ಆಂಧ್ರಶಬ್ದ ಚಿಂತಾಮಣಿ" ಎಂಬ ಗ್ರಂಥವೆ ತೆಲುಗಿನ ಪ್ರಥಮ ಕೃತಿಯಾಗಿದೆ. ಆದರೆ ಕೆಲವು ವಿದ್ವಾಂಸರು ನನ್ನಯ್ಯ ಕವಿಯ ಮಹಾಭಾರತ ಗ್ರಂಥವೆ ತೆಲುಗಿನ ಆದಿಗ್ರಂಥವೆಂದು ವಾದಿಸುತ್ತಾರೆ. ಈ ಕುರಿತಾದ ಚರ್ಚೆ ಇನ್ನೂ ನಡೆಯುತ್ತಲೆ ಇದೆ. ತೆಲುಗಿನ ಸಾಹಿತ್ಯ ಚರಿತ್ರೆ ಹಾಗೂ ಭಾಷಾ ಚರಿತ್ರೆಯನ್ನು ತಿಳಿಯಲು ಖಚಿತವಾದ ಯಾವುದೇ ಆಧಾರಗಳು ನಮಗೆ ದೊರೆಯುವುದಿಲ್ಲ.

ವಿದ್ವಾಂಸರು ತೆಲುಗು ಸಾಹಿತ್ಯದ ಬೆಳವಣಿಗೆಯನ್ನು ಈ ಕೆಳಕಂಡಂತೆ ಆರುಘಟ್ಟಗಳಲ್ಲಿ ಗುರುತಿಸಿದ್ದಾರೆ.

1. ಆರಂಭಕಾಲದಿಂದ ಕ್ರಿ.ಶ. 1020ರವರೆಗಿನ ಕಾಲ. ಇದನ್ನು ನನ್ನಯ್ಯ ಪೂರ್ವಕಾಲವೆಂದು ಕರೆಯಲಾಗಿದೆ.
2. ಕ್ರಿ. ಶ. 1020 ರಿಂದ ಕ್ರಿ.ಶ. 1050ರವರೆಗಿನ ಕಾಲ ಇದನ್ನು ಪುರಾಣಯುಗ ಎಂದು ಕರೆಯುತ್ತಾರೆ.
3. ಕ್ರಿ. ಶ. 1400 ರಿಂದ ಕ್ರಿ.ಶ.1520 ರವರೆಗಿನ ಕಾಲ. ಇದನ್ನು ಶ್ರೀನಾಥಯುಗ ಎಂದು
4. ಕ್ರಿ. ಶ. 1520 ರಿಂದ ಕ್ರಿ.ಶ. 1600 ರವರೆಗಿನ ಕಾಲ ಇದನ್ನು ಪ್ರಭಂದಗಳ ಯುಗ ಎಂದು
5. ಕ್ರಿ. ಶ. 1600 ರಿಂದ ಕ್ರಿ.ಶ. 1800 ವರೆಗಿನ ಕಾಲ. ಈ ಕಾಲವನ್ನು ದಾಕ್ಷಿಣಾತ್ಯ ಯುಗ ಎಂದು
6. ಕ್ರಿ. ಶ. 1800 ಕ್ರಿ.ಶ. ನಂತರದ ಕಾಲ. ಇದನ್ನು ಆಧುನಿಕ ಯುಗವೆಂದು ಕರೆದಿದ್ದಾರೆ.

ವಿದ್ವಾಂಸರು ಮಾಡಿರುವ ಈ ವಿಂಗಡಣೆ ಸಮರ್ಪಕವಾದುದಲ್ಲ. ಆದರೂ ತೆಲುಗು ಸಾಹಿತ್ಯ ಯಾವ ಯಾವ ಕಾಲದಲ್ಲಿ ಹೇಗೆ ಬೆಳವಣಿಗೆ ಹೊಂದಿದೆ ಎಂಬುದನ್ನು ಅರಿಯಲು ಸ್ವಲ್ಪಮಟ್ಟಿಗೆ ಇದು ಸಹಾಯಕವಾಗಿದೆ. ಹಾಗೆಯೆ ತೆಲುಗು ಸಾಹಿತ್ಯದ ಬರಡು ಕಾಲವನ್ನು ತಿಳಿಯಲು ಕೂಡ ಸಹಾಯಕವಾಗಿದೆ.

ತೆಲುಗಿನ ಆದಿ ಮಹಾಕಾವ್ಯವೆಂದು ಹೇಳಲಾಗುವ ನನ್ನಯ್ಯ ಕವಿಯ "ಮಹಾಭಾರತ" ಗ್ರಂಥವು ಸಂಸ್ಕೃತ ಮಹಾಭಾರತದ ಭಾಷಾಂತರವಾಗಿದೆ. ಆದರೆ ಕಥೆ ಸಂಸ್ಕೃತದ್ದಾದರೂ ತನ್ನದೆ ಆದ ಸ್ವಂತಿಕೆಯಿಂದ ಇಲ್ಲಿ ಒಡಮೂಡಿದೆ. ಭಾಷೆಯ ಬಳಕೆ, ಛಂದಸ್ಸು, ರಚನಾ ಸಂವಿಧಾನ ಈ ಎಲ್ಲ ದೃಷ್ಟಿಯಿಂದಲೂ ಇದು ತನ್ನದೆ ಆದ ವಿಶಿಷ್ಟತೆಯನ್ನೊಳಗೊಂಡಿದೆ. ಹಾಗಾಗಿಯೆ ಇದನ್ನು ತೆಲುಗಿನ ಮಹಾಕಾವ್ಯವೆಂದು ಕರೆಯಲಾಗಿದೆ. ಈ ಕೃತಿಯ ಪ್ರಬುದ್ಧತೆಯನ್ನು ಗಮನಿಸಿರುವ ವಿದ್ವಾಂಸರು ಈ ಕೃತಿಗಿಂತಲೂ ಪೂರ್ವದಲ್ಲಿ ಅನೇಕ ಕೃತಿಗಳು ತೆಲುಗಿನಲ್ಲಿ ರಚನೆಯಾಗಿದ್ದಿರಬೇಕು ಎಂದು ಊಹಿಸಿದ್ದಾರೆ.

ನನ್ನಯ್ಯನ ಕಾಲಾ ನಂತರದಲ್ಲಿ ತೆಲುಗು ಸಾಹಿತ್ಯ ಅನೇಕ ಹೊಸ ಹೊಸ ಸಂವೇದನೆಗಳಿಗೆ ಸ್ಪಂದಿಸಿತು. ಅಂದರೆ ಆ ಕಾಲಾವಧಿಯಲ್ಲಿ ನಡೆದ ಸಾಮಾಜಿಕ ಕ್ರಾಂತಿಯಿಂದ ಪ್ರೇರಣೆಗೊಳಗಾಯಿತು. ಈ ಅವಧಿಯಲ್ಲಿ ಅನೇಕ ಭಕ್ತಿಕಾವ್ಯಗಳು ರಚನೆಗೊಂಡವು. ಕ್ರಿ. ಶ. 13ನೇ ಶತಮಾನದಲ್ಲಿ 'ಲಿಕ್ಕನ್ನ'

ಎಂಬುವನು ನನ್ನಯ್ಯನಿಂದ ಆರಂಭಗೊಂಡ ಮಹಾಭಾರತದ ಭಾಷಾಂತರ ಕಾರ್ಯವನ್ನು ಮುಂದುವರೆಸಿದ್ದಾನೆ. ಹಾಗೆಯೇ 14ನೇ ಶತಮಾನದ ಯರ್ರನ್ನನೂ ಕೂಡ ಅದೇ ಕೆಲಸವನ್ನು ಮಾಡಿದ್ದಾನೆ. ಜೊತೆಗೆ ಈತ ಭಕ್ತಿ ಕಾವ್ಯಗಳನ್ನೂ ರಚಿಸಿದ್ದಾನೆ.

ಕ್ರಿ. ಶ. 14ನೇ ಶತಮಾನದ ನಂತರ ಶ್ರೀನಾಥ ಯುಗದಲ್ಲಿ ತೆಲುಗು ಸಾಹಿತ್ಯ ತುಂಬ ಗಮನಾರ್ಹವಾದ ಬೆಳವಣಿಗೆಯನ್ನು ಕಂಡಿತು. ಈ ಕಾಲದಲ್ಲಿಯೂ ಕೂಡ ಸಂಸ್ಕೃತದಿಂದ ಪ್ರಭಾವಿತವಾದರೂ, ಅನೇಕ ಸ್ವತಂತ್ರ ಕೃತಿಗಳೂ ಬೆಳೆದವು. ಅನೇಕ ನಾಟಕಗಳು, ಕಾವ್ಯಕೃತಿಗಳು ಈ ಕಾಲದಲ್ಲಿ ರಚನೆಗೊಂಡವು. ಪ್ರಮುಖನಾದ ಶ್ರೀನಾಥ ಕವಿಯು 'ನೈಷಧಮ್' ಎಂಬ ಬಹಳ ಪ್ರಸಿದ್ಧ ಗ್ರಂಥವನ್ನು ರಚಿಸಿದ್ದಾನೆ. ಈ ಕಾಲದಲ್ಲಿಯೆ ತೆಲುಗಿನಲ್ಲಿ ಪ್ರಬಂಧ ಸಾಹಿತ್ಯ ಪ್ರಕಾರವು ಬೆಳಕು ಕಂಡು ಬೆಳೆಯಿತು. ಅಂತೆಯೆ ಬಹಳ ಜನಪ್ರಿಯವೂ ಕೂಡ ಆಯಿತು.

ಈ ಶ್ರೀನಾಥಯುಗದಲ್ಲಿಯೆ ತೆಲುಗಿನಲ್ಲಿ ರಾಮಾಯಣವನ್ನು ಆಧರಿಸಿದ ಕೃತಿಗಳು ಬೆಳೆಯತೊಡಗಿದವು. ತೆಲುಗಿನ ಪ್ರಥಮ ರಾಮಾಯಣ 'ರಂಗನಾಥ ರಾಮಾಯಣ'. ಇದರ ಕರ್ತೃ 'ಗೋನಾಬುದ್ಧರೆಡ್ಡಿ' ಈತನ ನಂತರ ಅನೇಕರು ರಾಮಾಯಣವನ್ನು ಕುರಿತಂತೆ, ರಾಮಾಯಣದ ಕಥೆಯನ್ನು ಆಧರಿಸಿದಂತೆ ಕೃತಿಗಳನ್ನು ರಚಿಸಿದ್ದಾರೆ. ಪೋತನ, ಜಕ್ಕನ, ಗೌರನ್ನ ಮೊದಲಾದವರು ಈ ಕಾಲದ ಪ್ರಮುಖ ಕವಿಗಳಾಗುತ್ತಾರೆ.

ಹದಿನಾರನೆ ಶತಮಾನದ ನಂತರದ ಕಾಲ ತೆಲುಗಿನಲ್ಲಿ ಬಹಳ ಪ್ರಮುಖ ಕಾಲ. ಈ ಹದಿನಾರು ಮತ್ತು ಹದಿನೇಳನೆ ಶತಮಾನದಲ್ಲಿ ಅನೇಕ ಅತ್ಯಮೂಲ್ಯ ಕೃತಿಗಳು ತೆಲುಗು ಸಾಹಿತ್ಯದಲ್ಲಿ ಮೂಡಿ ಬಂದಿವೆ. ಅಂತಹ ಪ್ರಮುಖ ಕೃತಿಗಳೆಂದರೆ ಶ್ರೀ ಕೃಷ್ಣದೇವರಾಯನ 'ಅಮುಕ್ತಮೌಲದ' ಪೆದ್ದಣ್ಣ ಕವಿಯ 'ಮನುಚರಿತೆ' ಮೊದಲಾದವುಗಳು ಬಹಳ ಮುಖ್ಯವಾಗುತ್ತವೆ.

ಹದಿನಾರು ಮತ್ತು ಹದಿನೇಳನೆ ಶತಮಾನದಲ್ಲಿ ಸಮೃದ್ಧವಾಗಿ ಬೆಳೆದು ಮುಂದುವರೆದ ತೆಲುಗು ಸಾಹಿತ್ಯದಲ್ಲಿ ಹದಿನೆಂಟನೆ ಶತಮಾನದ ವೇಳೆಗೆ ಹೊಸ ಅಲೆಗಳು ಕಾಣಿಸಿಕೊಂಡವು. ಅದರಲ್ಲಿಯೂ ಬಹಳ ಮುಖ್ಯವಾಗಿ ಹತ್ತೊಂಬತ್ತನೆಯ ಶತಮಾನದ ನಂತರ ತೆಲುಗು ಸಾಹಿತ್ಯ ಪಾಶ್ಚಿಮಾತ್ಯರ ಸಂಪರ್ಕ ಪಡೆಯಿತು. ಆ ಮೂಲಕ ಹೊಸತನವನ್ನು ಕಂಡುಕೊಳ್ಳತೊಡಗಿತು.

ಅದರ ಪರಿಣಾಮವಾಗಿ ಹೊಸ ಸಾಹಿತ್ಯ ಪ್ರಕಾರಗಳಾದ ಕವಿತೆ, ಕಾದಂಬರಿ, ಸಣ್ಣಕಥೆ, ನಾಟಕ, ಪ್ರಬಂಧ, ವಿಮರ್ಶೆ ಮೊದಲಾದವುಗಳು ಕಾಣಿಸಿಕೊಂಡು ಸಮೃದ್ಧ ಸಾಹಿತ್ಯ ಸೃಷ್ಟಿಯಾಯಿತು.

ಆಧುನಿಕ ತೆಲುಗಿನ ಪ್ರಮುಖ ಕವಿಗಳೆಂದರೆ ವೀರೇಶಲಿಂಗಮ್ ಪಂತಲು, ಸುಬ್ಬರಾವ್, ವಿಶ್ವನಾಥ, ಸತ್ಯನಾರಾಯಣ, ರಾಯಪ್ರೋಲು, ಗುರಜಾವಾ ಅಪ್ಪರಾವ್, ಕತೂರಿ ವೆಂಕಟೇಶ್ವರ ರಾವ್, ಜೋಷ್ವಾ, ದೇವುಲಪಲ್ಲಿ ವೆಂಕಟಕೃಷ್ಣಶಾಸ್ತ್ರಿ, ನಾರಾಯಣಾಚಾರ್ಲು ಉನ್ನವ ಲಕ್ಷ್ಮೀನಾರಾಯಣ, ಬುಚ್ಚಿಬಾಬು, ಕಲ್ಯಾಣರಾವ್ ಈ ಮೊದಲಾದವರು ಮುಖ್ಯರಾಗುತ್ತಾರೆ. ವೀರೇಶಲಿಂಗಂ ಪಂತಲು ಅವರ 'ರಾಜಶೇಖರ ಚರಿತ್ರಮ್' ಎಂಬ ಕಾದಂಬರಿಯು ತೆಲುಗಿನ ಬಹಳ ಮುಖ್ಯ ಕೃತಿಯಾಗಿದೆ. ಹಾಗೆಯೆ ಉನ್ನಾವ ಲಕ್ಷ್ಮೀನಾರಾಯಣ ಅವರ 'ಮಾಲಪಲ್ಲಿ' ಗ್ರಂಥವು ಕೂಡ ಬಹಳ ಪ್ರಮುಖವಾದುದಾಗಿದೆ. 'ಕನ್ಯಾಶುಲ್ಕಮ್' ಎಂಬುದು ತೆಲುಗಿನ ಪ್ರಥಮ ನಾಟಕವಾಗಿದೆ. ಇದರ ಕರ್ತೃ ಗುರುಜಾವಾ ಅಪ್ಪಾರಾವ್.

ಇತ್ತೀಚಿನ ಕಾಲಘಟ್ಟದಲ್ಲಿ ತೆಲುಗಿನಲ್ಲಿ ಅನೇಕ ಕ್ರಾಂತಿಕಾರಿ ಕವಿಗಳು ಬೆಳಕಿಗೆ ಬಂದಿದ್ದಾರೆ. ಅವರುಗಳಲ್ಲಿ ಪ್ರಮುಖರೆಂದರೆ 'ಶ್ರೀ ಶ್ರೀ' ಯವರು.

ತೆಲುಗು ಭಾಷೆಯನ್ನು ಕುರಿತಂತೆ ಇತ್ತೀಚೆಗೆ ತುಂಬ ವ್ಯಾಪಕವಾದ ಅಧ್ಯಯನಗಳು ನಡೆಯುತ್ತಿವೆ, ಮತ್ತು ನಡೆದಿವೆ. ಈ ತೆಲುಗು ಭಾಷೆಯೆಂಬುದು ಜೇನುತುಪ್ಪದಷ್ಟು ಸವಿಯಾದ ಭಾಷೆಯೆಂದು ತೆಲುಗರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಈ ತೆಲುಗು ಎಂಬ ಪದ 'ತ್ರಿಲಿಂಗ' ಎಂಬ ಪದದಿಂದ ಬಂದಿದೆ ಎಂಬುದು ವಿದ್ವಾಂಸರ ಊಹೆಯಾಗಿದೆ. ಅದು ಹೇಗೆಂದರೆ ಆಂಧ್ರಪ್ರದೇಶವು ಕಾಳೇಶ್ವರಿ, ಶ್ರೀಶೈಲ ಹಾಗೂ ಭೀಮೇಶ್ವರಿ ಎಂಬ ಮೂರು ಶಿವಕ್ಷೇತ್ರಗಳಿಂದ ಕೂಡಿದೆ. ಆ ಮೂಲಕ ಈ ತ್ರಿಲಿಂಗ ಎಂಬ ಶಬ್ದ ರೂಪಗೊಂಡು ಅದು ಕಾಲಕ್ರಮೇಣ ತೆಲುಗು ಆಗಿರಬಹುದು ಎಂಬುದೇ ವಿದ್ವಾಂಸ ಅಭಿಪ್ರಾಯವಾಗಿದೆ.

ಈ ತೆಲುಗಿನಲ್ಲಿ ರಾಯಲ್‌ಸೀಮೆಯ ತೆಲುಗು, ನೆಲ್ಲೂರು, ಗೋದಾವರಿ, ಕೃಷ್ಣ, ಗುಂಟೂರು ಸೀಮೆಯ ತೆಲುಗು, ಹೈದ್ರಾಬಾದ್ ತೆಲುಗು ಈ ಮೊದಲಾದ ಪ್ರಾಂತ್ಯಭೇದಗಳಿವೆ. ಸವಾರ, ಪಷ್ಣ, ಗೊಲ್ಲರಿ, ದೊಂಬ, ಮನ್ನೆ, ಜೇರಡಿ, ದಾಸರಿ, ಚಂಚು, ಕೊಮ್ಮಾವ್ರೂ ಯುನದಿ ಈ ಮೊದಲಾದವುಗಳು ತೆಲುಗಿನ ಉಪಭಾಷೆಗಳಾಗಿವೆ.

# ಮಲೆಯಾಳಂ

ಈ ಭಾಷೆಯು ಭಾರತದ ಪಶ್ಚಿಮ ಮತ್ತು ದಕ್ಷಿಣ ಕರಾವಳಿ ತೀರದ ಸುಂದರ ಮಲೆಕಾನನಗಳ ಪ್ರದೇಶವಾದ ಕೇರಳದ ಆಡಳಿತ ಭಾಷೆ ಹಾಗೂ ಮಾತೃಭಾಷೆ. ಈ ಭಾಷೆಯನ್ನು ಕೇರಳ ರಾಜ್ಯದ ಸುಮಾರು ಮೂರು ಕೋಟಿ ಜನ ಮಾತನಾಡುವರು. ಕೇರಳವೆ ಅಲ್ಲದೆ ಭಾರತಾದ್ಯಂತ ಅನೇಕ ಪ್ರಮುಖ ಊರುಗಳಲ್ಲಿ ಈ ಭಾಷೆಯನ್ನಾಡುವ ಜನ ಇದ್ದಾರೆ. ಈ ಭಾಷೆಯೂ ಕೂಡಾ ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಭಾಷೆ. ತಮಿಳಿಗೂ ಇದಕ್ಕೂ ಅನೇಕ ರೀತಿಯಾದ ಸಾಮ್ಯತೆಯಿದೆ. ಬಹುಪಾಲು ಈ ಭಾಷೆಯು ತಮಿಳನ್ನು ಹೋಲುತ್ತದೆ. ಹಾಗಾಗಿ ಇದು ಕ್ರಿ. ಶ. 9ನೇ ಶತಮಾನದ ವೇಳೆಗೆ ತಮಿಳು ಭಾಷೆಯಿಂದ ಜನಿಸಿ ಬೇರೆ ಭಾಷೆ ಆಗಿರಬಹುದು ಎಂದು ವಿದ್ವಾಂಸರು ಊಹಿಸಿದ್ದಾರೆ. ಈ ಭಾಷೆಯ ಮೇಲೆ ಸಂಸ್ಕೃತದ ಪ್ರಭಾವವೂ ಕೂಡ ಬಹಳವಾಗಿಯೆ ಕಂಡು ಬರುತ್ತದೆ.

ದ್ರಾವಿಡ ಭಾಷೆಗಳಲ್ಲಿ ಕನ್ನಡ-ತಮಿಳಿನ ನಂತರದ ಪ್ರಾಮುಖ್ಯತೆಯನ್ನು ಈ ಭಾಷೆಯು ಪಡೆದುಕೊಂಡಿದೆ. ಈ ಭಾಷೆಗೆ ಮಲೆಯಾಳಂ ಎಂಬ ಶಬ್ದದಿಂದ ಕರೆಯುತ್ತಿರುವುದು ಹದಿನೆಂಟನೆ ಶತಮಾನದಿಂದ ಈಚೆಗೆ. ಆ ಮೊದಲು ಮಲೆನಾಟು, ಮಲೆನಾಟ್ಟು, ಮಲೆಯಾಳಿ ಎಂಬ ಶಬ್ದಗಳು ಬಳಕೆಯಲ್ಲಿದ್ದವು. ಈ ಮಲೆಯಾಳಂ ಎಂಬುದು ಸಂಸ್ಕೃತಶಬ್ದ.

ಕ್ರಿ. ಶ. 9ನೇ ಶತಮಾನದ ಸಮುಮಾರಿನಲ್ಲಿ ತಮಿಳಿನಿಂದ ಈ ಭಾಷೆ ಜನಿಸಿದೆ ಎಂದು ಊಹಿಸಿದರೂ ಕೂಡ, ಈ ಭಾಷೆ ಕಾಲಕಾಲಕ್ಕೆ ಅನೇಕ ಹಂತದಲ್ಲಿ ವಿಕಾಸಹೊಂದಿದೆ. ಮಲೆಯಾಳಂ ಮತ್ತು ತಮಿಳುಗಳು ಸಾಮೀಪ್ಯ ಹೊಂದಿದ್ದರೂ ಅನೇಕ ಭಿನ್ನತೆಗಳೂ ಕೂಡ ಕಂಡು ಬರುತ್ತವೆ.

ಮುಳ್ಳುಕುರುಂಬ, ನರ್ಸಾಣೆ, ನಾಯರ್, ನಂಬೂದ್ರಿ, ಮಾಪ್ಪಾ, ಕುರುಂಬ, ನಗರಿ ಮಲೆಯಾಳಂ, ರೋಮನ್ ಮಲೆಯಾಳಂ, ಕಸ್ಸರ್, ಕಸ್ತೂರಿ, ಕೊನವರ್, ಕುರುವ, ಪರವ, ಯರವ, ಕೊಂಗಿ, ಕೊರವ, ಪಣಿಯ, ವೆತ್ತುವ ಈ ಮೊದಲಾದವುಗಳು ಮಲೆಯಾಳಂನ ಉಪಭಾಷೆಗಳಾಗಿವೆ.

ಮಲೆಯಾಳಂನ ಮೊಟ್ಟಮೊದಲ ಶಾಸನ ಕ್ರಿ. ಶ. 10ನೇ ಶತಮಾನ

್ರಾಣುರೇಣುವಿನ ಕೊಟ್ಟಾಯಂ ತಾಮ್ರಶಾಸನ. ಇದಕ್ಕೂ ಹಿಂದೆ ಮಲೆಯಾಳಂನಲ್ಲಿ ಯಾವುದೆ ಶಾಸನಗಳು ದೊರೆಯುವುದಿಲ್ಲ. ಮಲೆಯಾಳಂನ ಸಾಹಿತ್ಯ ಚರಿತ್ರೆ ಆರಂಭವಾದುದು 13ನೇ ಶತಮಾನದಿಂದ. ಕ್ರಿ. ಶ. 1230ರ ಲೀಲಾವತಿ ತಿಲಕಂ' ಎಂಬುದು ಮಲೆಯಾಳಂನ ಮೊದಲ ಗ್ರಂಥ ಎಂದು ಹೇಳಲಾಗಿದೆ. ಹಾಗೆಯೇ ಇದೇ ಕಾಲಘಟ್ಟದ 'ರಾಮಚರಿತಂ' ಎಂಬುದು ಕೂಡ ಮೊದಲ ಗ್ರಂಥವೆಂದು ಹೇಳಲಾಗುತ್ತಿದೆ. ಈ ಎರಡರ ವಿಚಾರದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯ/ವೈರುಧ್ಯ ಇದೆ.

ಮಲೆಯಾಳಂ ಸಾಹಿತ್ಯದ ಆರಂಭದ ದಿನಗಳಲ್ಲಿ ರಾಮಾಯಣ ಮತ್ತು ಭಾಗವತಗಳ ಅನುವಾದಗಳು ಯಥೇಚ್ಛವಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ. ಕೇರಳದ ವಿಶಿಷ್ಟ ನೃತ್ಯ ಕಲೆ ಕಥಕ್ಕಳಿ. ಇದು ಸಾಹಿತ್ಯ ಮತ್ತು ಸಂಭಾಷಣೆಯಲ್ಲಿ ಅಪಾರವಾದ ವೈವಿಧ್ಯತೆಯನ್ನು ಹೊಂದಿದೆ. ಈ ಕಥಕ್ಕಳಿಯನ್ನು ಅನುಸರಿಸಿಯೆ ಅನೇಕ ಸಾಹಿತ್ಯಕ ಕೃತಿಗಳು ಕೇರಳದಲ್ಲಿ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ತುಂಚುರನ್ ಎಂಬುವನು ಈ ಮಾದರಿಯ ಅನೇಕ ಕೃತಿಗಳನ್ನು ರಚಿಸಿದ್ದಾನೆ. ಹಾಗೆಯೆ ತೋರನ್ ಎಂಬುವನು ಅನೇಕ ತತ್ವಪ್ರಧಾನ ಗ್ರಂಥಗಳನ್ನು ರಚಿಸಿದ್ದಾನೆ.

ಮಲೆಯಾಳಂ ಸಾಹಿತ್ಯವು ಆಧುನಿಕತೆಗೆ ಒಳಪಟ್ಟು ಸಮೃದ್ಧವಾಗಿ ಬೆಳೆದದ್ದು ಹತ್ತೊಂಬತ್ತನೆಯ ಶತಮಾನದ ನಂತರದ ಕಾಲದಲ್ಲಿ ಎಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ. ಈ ವೇಳೆಗೆ ಪಾಶ್ಚಾತ್ಯರ ಪ್ರಭಾವವು ಮಲೆಯಾಳಂನ ಮೇಲೆ ಬಿದ್ದಿತು. 'ಬೆಂಜಮಿನ್ ಬೇಲಿ' ಎಂಬುವನು ಮಲೆಯಾಳಂ - ಇಂಗ್ಲಿಷ್ ನಿಘಂಟನ್ನು ರಚಿಸಿದನು. ಹಾಗೆಯೆ ಮಲೆಯಾಳಂ ವ್ಯಾಕರಣ ಗ್ರಂಥಗಳೂ ಕೂಡ ಈ ಒಂದು ಅವಧಿಯಲ್ಲಿ ರಚನೆಯಾದವು. ಇದೇ ಕಾಲದಲ್ಲಿಯೆ ಕೋಯಿಲ್‌ತಂಬುರ್ ಎಂಬ ಕವಿಯು ಸಂಸ್ಕೃತದ ಶಾಕುಂತಲ ನಾಟಕವನ್ನು ಮಲೆಯಾಳಂಗೆ ಅನುವಾದಿಸಿದನು. ಈತ ಸಂಸ್ಕೃತ ಮತ್ತು ಮಲೆಯಾಳಂನ ಉದ್ದಾಮಪಂಡಿತನಾಗಿದ್ದು ಅನೇಕ ಅತ್ಯುತ್ತಮ ಕೃತಿಗಳನ್ನು ರಚಿಸಿದ್ದಾನೆ. ರಾಜವರ್ಮನೆಂಬ ಕವಿಯು 'ಮಯೂರ ಸಂದೇಶ' ಎಂಬ ಉತ್ತಮ ಕೃತಿಯನ್ನು ರಚಿಸಿದನು.

ಕ್ರಿ. ಶ. ಇಪ್ಪತ್ತನೆಯ ಶತಮಾನದ ವೇಳೆಗೆ ಮಲೆಯಾಳಂನಲ್ಲಿ ಜನಭಾಷೆಗೆ ಹತ್ತಿರವಾದ ಸಾಹಿತ್ಯ ರಚನೆಯಾಗತೊಡಗಿತು. ಕೊಂಡಂಗೊಲ್ಲೂರ ಕುಞ್ಞಿಕುಟ್ಟನ್.

ವೆಣ್ಮಣಿ ಈ ಮೊದಲಾದ ಸಾಹಿತಿಗಳು ಆಡುಭಾಷೆಯಲ್ಲಿ ಕಾವ್ಯ ರ
ಮಾಡಿದರು. ಚಂದುಮೆನನ್ ಎಂಬುವರು 'ಇಂದುಲೇಖಾ' ಎ
ಅತ್ಯುತ್ತಮವಾದ ಕಾದಂಬರಿಯನ್ನು ಮಳೆಯಾಳಂ ಸಾಹಿತ್ಯಕ್ಕೆ ನೀಡಿದರು
ಆರ್. ರಾಜವರ್ಮ ಎಂಬುವರು 'ಕೇರಳ ಪಾಣಿನೀಯ' ಎಂಬ ವ್ಯಾ
ಕೃತಿಯನ್ನು ಬರೆದರು. ರಮಣಪಿಳ್ಳೆಯವರು 'ಮಾರ್ತಾಂಡ ವರ್ಮ' ಎ
ಕೃತಿ ಬರೆದರು. ಕೋಚುಣ್ಣಿ, ಥಂಪುರನ್ ಈ ಮೊದಲಾದವರು ಅನೇಕ ಉ
ನಾಟಕಗಳನ್ನು ರಚಿಸಿದರು. ಅಂಥ ನಾಟಕಗಳಲ್ಲಿ 'ಮೇರಿಯಮಾನ್' ನಾ
ಅತ್ಯುತ್ತಮವಾದುದಾಗಿದೆ.

ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಕುಮಾರ ಆಶ
ಪಣಿಕ್ಕರ್, ಬಾಲಕೃಷ್ಣ ಈ ಮೊದಲಾದವರು ಅಭೂತಪೂರ್ವ ಭಾವಗೀತೆ
ಹಾಗೂ ಕ್ರಾಂತಿಗೀತೆಗಳನ್ನು ರಚಿಸಿದರು. ಈ ನಂತರದ ಕಾಲದಲ್ಲಿ ಶ
ಕುರುಪ್, ವಲ್ಲತ್ತೋಳ್ ಈ ಮುಂತಾದವರು ಕಾವ್ಯದ ನಾಡನ್ನು ಹಿಡಿದು ಸ
ಚಕ್ರವನ್ನು ಮುಂದುವರೆಸಿಕೊಂಡು ಹೋದರು. ವಲ್ಲತ್ತೋಳರು ರಾಮಾ
ಮಹಾಕಾವ್ಯವನ್ನು ಮಲೆಯಾಳಂಗೆ ಅನುವಾದಿಸಿದರು. ಹಾಗೆಯೇ ಕುಂ
ನಾರಾಯಣ ಮೆನನ್‌ರು ಲಾವಣಿಗಳನ್ನು ಬರೆದರು. ಮಾಪಿಳ್ಳೆಯವರು 'ದ
ವಿಜಯಂ' ಕೃತಿಯನ್ನು ರಚಿಸಿದರು.

ತಕಳಿ ಶಿವಶಂಕರಪಿಳ್ಳೈ ಎಂಬ ಮಲೆಯಾಳಂನ ಸರ್ವಶ್ರೆ
ಕಾದಂಬರಿಕಾರರು 'ಚೆಮ್ಮೀನ್' ಮೊದಲಾದ ಉತ್ಕೃಷ್ಟ ಕಾದಂಬರಿಗಳನ್ನು ಬ
ಮಳೆಯಾಳಂ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ವೈ.
ಮಹಮದ್‌ಬಷೀರರು ಅತ್ಯುತ್ತಮವಾದ ಸಣ್ಣಕತೆಗಳನ್ನು ರಚಿಸಿದರು.

ಮಲೆಯಾಳಂನ ಪ್ರಮುಖ ಮಹಿಳಾ ಲೇಖಕಿಯರಾದ ತೋಟ
ಅಮ್ಮಾ ಎಂಬುವರು 'ಸುಭದ್ರಾ ವಿಜಯಂ' ಎಂಬ ಕೃತಿಯನ್ನು ರಚಿಸಿ
ನಳಪ್ಪತ ಬಾಲಮಣಿ, ಲಲಿತಾಂಬಿಕ ಅಂತರ್ಜನಂ ಈ ಮೊದಲಾದವರು ಉ
ಉತ್ತಮ ಕವಿತೆಗಳನ್ನು ಬರೆದಿದ್ದಾರೆ. ಹಾಗೆಯೆ ಸರಸ್ವತಿ ಅಮ್ಮಾ ಅ
ಕಾದಂಬರಿ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಈ ಮುಂದಿನ ಕಾಲಘ
ಮಲೆಯಾಳಂ ಸಾಹಿತ್ಯದಲ್ಲಿ ಕೇಶವದೇವ, ಪಿ. ಸಿ. ಕೃಷ್ಣನ್ ನ
ಕಾದಂಬರಿಕಾರರಾಗಿ, ಕೆ. ಸರಸ್ವತಿ, ಜೋಸೆಫ್ ಮುಂಡಶೇರಿ, ಪೊಂಕುನ್ನಂ
ಮಹಮದ್ ಈ ಮೊದಲಾದವರು ಉತ್ತಮ ಕಥೆಗಾರರಾಗಿ ಹೆಸರು ಮಾಡಿ

# ತುಳು

ಇದು ಕರ್ನಾಟಕದ ದಕ್ಷಿಣ ಮತ್ತು ಉತ್ತರ ಕರಾವಳಿ ಜಿಲ್ಲೆಗಳ ಜನರ ಮಾತೃಭಾಷೆ. ಈ ಪ್ರದೇಶದ ಸುಮಾರು ಇಪ್ಪತ್ತೈದು ಲಕ್ಷಕ್ಕೂ ಅಧಿಕ ಸಂಖ್ಯೆಯ ಜನರು ಇದನ್ನು ಮಾತನಾಡುತ್ತಾರೆ. ಇದೊಂದು ಆಡುಭಾಷೆ. ಇದಕ್ಕೆ ತನ್ನದೆ ಆದ ಲಿಪಿಯಿಲ್ಲ. ಬಹಳ ಹಿಂದಿನಿಂದಲೂ ಇದನ್ನು ಆಡುಭಾಷೆಯಾಗಿಯೆ ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ.

ಈ ಭಾಷೆಯು ಅನೇಕ ರೀತಿಯಿಂದ ಮಲೆಯಾಳಂ ಭಾಷೆಗೆ ಹತ್ತಿರವಾಗಿದೆ. ಆದರೂ ಇದರಲ್ಲಿ ಕನ್ನಡ, ತಮಿಳು ಮತ್ತು ತೆಲುಗಿನ ಅನೇಕ ಅಂಶಗಳು ಇವೆ. ಹಾಗಾಗಿ ಇದನ್ನು ಈ ನಾಲ್ಕು ದ್ರಾವಿಡ ಭಾಷೆಗಳ ಮಿಶ್ರಣದಿಂದ ಜನಿಸಿದ ಭಾಷೆ ಎಂದು ಕೂಡ ಕರೆಯುತ್ತಾರೆ. ಕ್ರಿ. ಶ. ಹನ್ನೆರಡನೆ ಶತಮಾನದ ವಿಷ್ಣುವರ್ಧನನ ಶಾಸನದಲ್ಲಿ ಈ ತುಳು ಎಂಬ ಶಬ್ದ ದೊರೆತಿದೆ. ಕವಿ ರತ್ನಾಕರ ವರ್ಣಿಯು ತನ್ನ ಭರತೇಶ ವೈಭವ ಗ್ರಂಥದಲ್ಲಿ ಈ ತುಳು ಎಂಬ ಶಬ್ದವನ್ನು ಬಳಸಿದ್ದಾನೆ. ಹಾಗೆಯೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದೊರೆತಿರುವ ಬಹುಪಾಲು ಶಾಸನಗಳಲ್ಲಿ ಈ ತುಳು ಶಬ್ದ ದೊರೆತಿದೆ.

ಈ ತುಳು ಭಾಷೆಯಲ್ಲಿ ಬಹಳ ಸಮೃದ್ಧವಾದ ಜಾನಪದ ಸಾಹಿತ್ಯ ಇದೆ. ಇತ್ತೀಚಿನ ಅನೇಕ ವಿದ್ವಾಂಸರು ಈ ಅತ್ಯಮೂಲ್ಯ ತುಳುವ ಜಾನಪದವನ್ನು ಸಂಗ್ರಹಿಸಿದ್ದಾರೆ. ಹಾಗೆಯೇ ಇತ್ತೀಚಿನ ದಿನಗಳಲ್ಲಿ ಈ ತುಳುವಿನಲ್ಲಿ ಸಾಹಿತ್ಯ ಕೂಡ ಬೆಳೆದು ಬಂದಿದೆ. ಅನೇಕ ಜನ ಉದಯೋನ್ಮುಖ ಕವಿಗಳು ತುಳುವಿನಲ್ಲಿ ಕಾಣಿಸಿಕೊಂಡಿದ್ದಾರೆ ಹಾಗೂ ತಮ್ಮ ಅಪಾರವಾದ ಸಾಹಿತ್ಯ ಕೃಷಿಯನ್ನು ಮುಂದುವರೆಸುತ್ತಿದ್ದಾರೆ. ಇದನ್ನು ಬರೆಯಲು ಕೆಲವರು ಕನ್ನಡಲಿಪಿಯನ್ನು ಬಳಸಿದರೆ, ಕೆಲವರು ಮಲೆಯಾಳಂ ಲಿಪಿಯನ್ನು ಬಳಸುತ್ತಾರೆ.



# ಮರಾಠಿ

ಮರಾಠಿಯು ಭಾರತದ ಪ್ರಮುಖ ಭಾಷೆಗಳಲ್ಲಿ ಒಂದು. ಇದು ಮಹಾರಾಷ್ಟ್ರಿ ಅಪಭ್ರಂಶದಿಂದ ವಿಕಾಸಗೊಂಡು ಬೆಳೆದುಬಂದಿದೆ. ಇದನ್ನು ಮಹಾರಾಷ್ಟ್ರ ರಾಜ್ಯದ ಸುಮಾರು ನಾಲ್ಕೂವರೆ ಕೋಟಿಗೂ ಅಧಿಕ ಜನ ಮಾತನಾಡುತ್ತಾರೆ. ಹಾಗೆಯೆ ಇದು ಮಹಾರಾಷ್ಟ್ರ ರಾಜ್ಯದ ಆಡಳಿತ ಭಾಷೆ ಕೂಡ ಆಗಿದೆ.

ಮರಾಠಿ ಭಾಷೆಯ ಸಾಹಿತ್ಯವು ಕ್ರಿ. ಶ. 10ನೇ ಶತಮಾನದಿಂದ ಈಚೆಗೆ ಆರಂಭಗೊಂಡಿದೆ. ಈ ಮರಾಠಿ ಭಾಷೆಯನ್ನು ಬರೆಯಲು ನಾಗರಿ ಲಿಪಿಯನ್ನು ಉಪಯೋಗಿಸುತ್ತಾರೆ. ಈ ಮರಾಠಿ ಸಾಹಿತ್ಯವು ಆರು ಪ್ರಮುಖ ಕಾಲಘಟ್ಟದಲ್ಲಿ ಬೆಳೆದು ಸಮೃದ್ಧವಾಗಿದೆ. ಆ ಆರು ಘಟ್ಟಗಳೆಂದರೆ -

1) ಮೊದಲನೆಯ ಕಾಲಘಟ್ಟ, ಕ್ರಿ. ಶ. 1189 ರಿಂದ 1320 ರವರೆಗೆ
2) ಎರಡನೆಯ ಕಾಲಘಟ್ಟ, ಕ್ರಿ. ಶ. 1320 ರಿಂದ 1600 ರವರೆಗೆ
3) ಮೂರನೆಯ ಕಾಲಘಟ್ಟ, ಕ್ರಿ. ಶ. 1600 ರಿಂದ 1700 ರವರೆಗೆ
4) ನಾಲ್ಕನೆಯ ಕಾಲಘಟ್ಟ, ಕ್ರಿ. ಶ. 1700 ರಿಂದ 1850 ರವರೆಗೆ
5) ಐದನೆಯ ಕಾಲಘಟ್ಟ, ಕ್ರಿ. ಶ. 1850 ರಿಂದ 1947 ರವರೆಗೆ
6) ಆರನೆಯ ಕಾಲಘಟ್ಟ, ಕ್ರಿ. ಶ. 1947 ರಿಂದ ಇತ್ತೀಚಿನದು.

ಈ ಮೊದಲನೆಯ ಹಾಗೂ ಎರಡನೆಯ ಕಾಲಘಟ್ಟದ ಬಹುಪಾಲು ಸಾಹಿತ್ಯವೆಲ್ಲ ಮತಧರ್ಮ ಆಧಾರಿತ ಸಾಹಿತ್ಯವಾಗಿದೆ. ಈ ಕಾಲದ ಎಲ್ಲ ಸಾಹಿತ್ಯ ಕೃತಿಗಳೂ ಧರ್ಮದ ಮುಖವಾಣಿಗಳಾಗಿ ಬೆಳೆದಿವೆ. ಧರ್ಮ ಮತ್ತು ಆಧ್ಯಾತ್ಮಿಕ ವಿಚಾರಗಳನ್ನು ಪ್ರಸಾರ ಮಾಡುವ ಉದ್ದೇಶದಿಂದಲೆ ಬೆಳೆದು ಬಂದಿವೆ.

ಈ ಕಾಲದ ಪ್ರಮುಖ ಕೃತಿ ಮುಕುಂದರಾಜ ರಚಿಸಿದ 'ವಿವೇಕಸಿಂಧು' ಎಂಬುದಾಗಿದೆ. ಈ ಕಾಲದ ಪ್ರಮುಖ ಸಾಹಿತ್ಯ ಪ್ರಕಾರ 'ಕಾವ್ಯ'ವೆ ಆದರೂ ಗದ್ಯಸಾಹಿತ್ಯ ಕೂಡ, ಸಾಕಷ್ಟು ಪ್ರಮಾಣದಲ್ಲಿ ಬೆಳೆದಿದೆ. ಈ ಗದ್ಯ ಕವಿಗಳು ಸಂಸ್ಕೃತದ ಪ್ರಭಾವಕ್ಕೆ ಸಿಲುಕದೆ ಮರಾಠಿಯನ್ನೆ ಪ್ರಧಾನವಾಗಿ ಬಳಸಿರುವುದೊಂದು ವಿಶೇಷವಾಗಿದೆ. ಈ ಗದ್ಯ ಪ್ರಕಾರವನ್ನು ಕಟ್ಟಿ ಬೆಳೆಸಿದ ಕೀರ್ತಿ

'ಮಹಾನುಭಾವರು' ಎಂಬ ಒಂದು ಧಾರ್ಮಿಕ ಪಂಥದರು ಪಾತ್ರವಾಗುತ್ತಾರೆ. ಈ ಕಾಲದಲ್ಲಿನ ಇತರ ಕೃತಿಗಳೆಂದರೆ ಸಂತ ಜ್ಞಾನೇಶ್ವರನ 'ಜ್ಞಾನೇಶ್ವರಿ' ಹಾಗೂ 'ಅಮೃತಾನುಭಾವ' ಎಂಬುವು. ಹಾಗೆಯೇ ಈತನ ಶಿಷ್ಯನಾದ ನಾಮದೇವನು ಕೂಡ ಒಳ್ಳೆಯ ಭಕ್ತಕವಿಯಾಗಿ ಮರಾಠಿಯಲ್ಲಿ ಹೆಸರು ಮಾಡಿದ್ದಾನೆ. ಈತ 'ವರ್ಕಾರಿ' ಎಂಬ ಒಂದು ಭಕ್ತಿಪಂಥದ ಸ್ಥಾಪಕ ಕೂಡ ಆಗಿದ್ದಾನೆ.

ಎರಡನೆ ಕಾಲಘಟ್ಟದ ಮರಾಠಿ ಸಾಹಿತ್ಯ ಕೂಡ ಮತ ಧರ್ಮದ ಚೌಕಟ್ಟಿನದೆ ಆಗಿದೆ. ಈ ಕಾಲದಲ್ಲಿನ ಪ್ರಮುಖ ಕವಿ ಸಂತ ಏಕನಾಥ. ಇವನು ಒಬ್ಬ ಸಂತನಾಗಿ, ಸಮಾಜ ಸುಧಾರಕನಾಗಿ ಜೊತೆಗೆ ಒಬ್ಬ ಕವಿಯಾಗಿ ಬಹಳ ಪ್ರಸಿದ್ಧನಾಗಿದ್ದಾನೆ. ಈತನ ಕೃತಿಯೆಂದರೆ 'ಭಾವಾರ್ಥ ರಾಮಾಯಣ'. ಇದು ಭಾಗವತ ಧರ್ಮಸಾರವನ್ನು ಒಳಗೊಂಡಿರುವ ಒಂದು ಗ್ರಂಥವಾಗಿದೆ.

ಮೂರನೆ ಕಾಲಘಟ್ಟದಲ್ಲಿ ಮರಾಠಿ ಸಾಹಿತ್ಯಕ್ಕೆ ಕ್ರೈಸ್ತ ಮಿಷನರಿಗಳ ಪ್ರಭಾವ ಬೀಳುತ್ತದೆ. ಗೋವಾದ ಕಡೆಯಿಂದ ಮಹಾರಾಷ್ಟ್ರ ಪ್ರವೇಶಿಸಿದ ಕ್ರೈಸ್ತ ಮಿಷನರಿಗಳು ತಮ್ಮ ಕ್ರೈಸ್ತ ಮತ ಪ್ರಚಾರವನ್ನು ಅವ್ಯಾಹತವಾಗಿ ಮುಂದುವರೆಸುತ್ತ ಅಲ್ಲಿನ ಕಲೆ, ಸಂಸ್ಕೃತಿ ಮತ್ತು ಸಾಹಿತ್ಯದ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿದರು. ಆ ಹಿನ್ನೆಲೆಯಲ್ಲಿಯೆ 'ಫಾದರ್ ಸ್ಟಿಫೆನ್ಸ್' ಎಂಬ ಪಾದ್ರಿಯು ಮರಾಠಿ ಭಾಷೆಯನ್ನು ಕಲಿತು, ಮರಾಠಿಯಲ್ಲಿಯೆ 'ಕ್ರಿಸ್ತ ಪುರಾಣ' ಎಂಬ ಕೃತಿಯನ್ನು ರಚಿಸಿದ್ದಾನೆ.

ಈ ಕಾಲದಲ್ಲಿಯೂ ಕೂಡ ಅನೇಕ ಸಂತಕವಿಗಳು ಕಾಣಿಸಿಕೊಂಡರು. ಅವರುಗಳಲ್ಲಿ ಪ್ರಮುಖರೆಂದರೆ ಮರಾಠಿಯ ಮಹಾನ್ ಸಂತಕವಿ 'ತುಕಾರಾಂ' ಮತ್ತು ರಾಮದಾಸ್ ಮುಖ್ಯರಾಗುತ್ತಾರೆ. ಸಂತ ತುಕಾರಾಂ ರಚಿಸಿದ ಅಭಂಗಗಳು ಎಂಬ ವಿಶಿಷ್ಟ ಸಾಹಿತ್ಯ ರಚನೆಗಳು ಮರಾಠಿ ಸಾಹಿತ್ಯದಲ್ಲಿಯೆ ಅತ್ಯುತ್ತಮವಾದವುಗಳಾಗಿವೆ.

ನಾಲ್ಕನೆಯ ಕಾಲಘಟ್ಟದಲ್ಲಿ ಮರಾಠಿ ಸಾಹಿತ್ಯವು ಸಾಕಷ್ಟು ವಿಸ್ತಾರವನ್ನು ಹೊಂದಿ ಬೆಳೆಯಿತು. ಅನೇಕ ಅತ್ಯುತ್ತಮ ಕೃತಿಗಳು ಈ ಅವಧಿಯಲ್ಲಿ ಬೆಳಕು ಕಂಡವು. ಕೃಷ್ಣದಯಾರ್ಣವ ಹಾಗೂ ಶ್ರೀಧರ ಎಂಬುವರು ಈ ಕಾಲದ ಪ್ರಮುಖ ಕವಿಗಳಾಗಿದ್ದಾರೆ.

ಐದನೆ ಕಾಲಘಟ್ಟದಲ್ಲಿ ಅಂದರೆ 1850ರ ನಂತರ ಆಧುನಿಕ ಮರಾಠಿ ಸಾಹಿತ್ಯವು ಬೆಳೆಯುತೊಡಗಿತು. 'ಕೇಶವಸುತ' ಎಂಬುವರನ್ನು ಆಧುನಿಕ ಮರಾಠಿ

ಕಾವ್ಯದ ಜನಕ ಎಂದು ಕರೆಯುತ್ತಾರೆ. ಈ ಒಂದು ಅವಧಿಯಲ್ಲಿ ಆಧುನಿ ಸಾಹಿತ್ಯ ಪ್ರಕಾರಗಳಾದ ಕವನ, ಸಣ್ಣಕಥೆ, ನಾಟಕ, ಕಾದಂಬರಿ, ಪ್ರಬಂಧ, ಜೀವನಚರಿತ್ರೆ ಈ ಮೊದಲಾದ ಕವಲುಗಳಲ್ಲಿ ಸಾಹಿತ್ಯವು ಬೆಳೆಯತೊಡಗಿತು.

ಅನೇಕ ಜನ ಪಾಶ್ಚಿಮಾತ್ಯ ವಿದ್ವಾಂಸರು ಮರಾಠಿ, ಇಂಗ್ಲಿಷ್ ನಿಘಂಟುಗಳನ್ನು ಬರೆದರು. ಮರಾಠಿ ಭಾಷಾಶಾಸ್ತ್ರವನ್ನು ಕುರಿತು ಅಧ್ಯಯನ ನಡೆಸಿದರು. ಹಾಗೆಯೆ ಚಿಪ್ಳುಂಕರರು ಪ್ರಬಂಧಗಳನ್ನು, ಹರಿನಾರಾಯಣ ಆಪ್ಟೆ, ವಿ. ಎಸ್. ಖಾಂಡೇಕರ ಮೊದಲಾದವರು ಕಾದಂಬರಿಗಳನ್ನು, ಮಾಮಾ ವಾರೇಕರ್ ಹಾಗೂ ಕಿರ್ಲೋಸ್ಕರ್ ಮೊದಲಾದವರು ನಾಟಕಗಳನ್ನು, ಎನ್. ಸಿ. ಕೇಳ್ಕರ್ ಮೊದಲಾದವರು ಜೀವನ ಚರಿತ್ರೆಗಳನ್ನು ಬರೆದರು.

ವಿ. ಎಸ್. ಖಾಂಡೇಕರ ಅವರ 'ಯಯಾತಿ' ಕಾದಂಬರಿಯು ಸಾಹಿತ್ಯದ ಶ್ರೇಷ್ಠ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದ ಕಾದಂಬರಿಯಾಗಿದೆ. ಹರಿನಾರಾಯಣ ಆಪ್ಟೆಯವರ 'ಪಾನ್ ಲಕ್ಷಾತ್ ಕೋಣ್ ಘೇತೋ' ಕಾದಂಬರಿಯು ಮರಾಠಿಯಲ್ಲಿಯೆ ತುಂಬಾ ಅತ್ಯುತ್ತಮ ಕೃತಿಯಾಗಿದೆ. ಹಾಗೆಯೆ ಇದು ಅನೇಕ ಭಾರತೀಯ ಭಾಷೆಗಳಿಗೆ ಭಾಷಾಂತರವನ್ನು ಕೂಡ ಹೊಂದಿದೆ. ಮರ್ಡೇಕರ್ ಅವರ 'ರಾತ್ರೀಚ ದಿವಸ್" ಹಾಗೂ ಎಸ್. ಎನ್. ಪೆಂಡ್ಸೆರವರ 'ರಥಚಕ್ರ' ಇವುಗಳು ಕೂಡ ಉತ್ತಮ ಕಾದಂಬರಿಗಳಾಗಿವೆ.

ಮರಾಠಿ ಸಾಹಿತ್ಯದಲ್ಲಿ ಕಂಡು ಬಂದಂತಹ ಇನ್ನೊಂದು ಅತ್ಯಮೂಲ್ಯ ಸಾಹಿತ್ಯ ಪ್ರಕಾರವೆಂದರೆ ಆತ್ಮಕಥಾ ಪ್ರಕಾರ. ಇದು ಮರಾಠಿ ಸಾಹಿತ್ಯ ಇಡೀ ಭಾರತೀಯ ಸಾಹಿತ್ಯಕ್ಕೆ ನೀಡಿದ ಒಂದು ಮಹತ್ವದ ಕೊಡುಗೆಯೆಂದು ಹೇಳಬಹುದು. 1960ರಿಂದ ಈಚೆಗೆ ಈ ಒಂದು ಪ್ರಕಾರ ಮರಾಠಿಯಲ್ಲಿ ಆರಂಭವಾಯಿತು. ಮಹಾರಾಷ್ಟ್ರದಲ್ಲಿನ ಶೋಷಿತ ವರ್ಗಗಳಿಂದ ಬಂದಂತಹ ವಿದ್ಯಾವಂತ ಜನತೆ ತಮ್ಮ ಬದುಕಿನ, ತಾವು ಬೆಳೆದು ಬಂದ ಪರಿಸರದ ಎಲ್ಲ ಸೂಕ್ಷ್ಮಗಳನ್ನು ಅಸಲೀತನದೊಟ್ಟಿಗೆ ಚಿತ್ರಣಮಾಡಿ ರಚಿಸಿದ ಕೃತಿಗಳೆ ಈ ಆತ್ಮಕಥೆಗಳು ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಲಕ್ಷ್ಮಣಗಾಯಕ್‌ವಾಡರ 'ಉಚಲ್ಯಾ', ಶರಣಕುಮಾರ ಲಿಂಬಾಳೆಯವರ 'ಅಕ್ಕರಮಾಶಿ', ದಾದಾ ಸಾಹೇಬ ಮಲ್ಹಾರಿ ಮೋರೆಯವರ 'ಗಬಾಳ', ಮಹರ್‌ದಯಾ ಪವಾರರ 'ಬಲೂತ' ಮಾಧವಿದೇಸಾಯಿಯವರ 'ಕುಣೇಯಿಘುಮ' ಈ ಮೊದಲಾದವುಗಳು ಬಹಳ ಮುಖ್ಯವಾದವುಗಳಾಗಿವೆ. ಈ ಒಂದೊಂದು ಕೃತಿಗಳೂ ಕೂಡ ಒಂದೊಂದು ಶೋಷಿತವರ್ಗದ ಜನತೆಯ ಧಾರುಣ ಬದುಕಿನ ಚಿತ್ರಣವನ್ನು ನೀಡುತ್ತವೆ.

# ಗುಜರಾತಿ

ಗುಜರಾತಿ ಭಾಷೆಯು ಗುಜರಾತ್ ರಾಜ್ಯದ ಆಡಳಿತ ಭಾಷೆ. ಈ ಭಾಷೆಯು ಶೌರಸೇನಿ ಅಪಭ್ರಂಶದ ನಾಗರೀ ಎಂಬುದರ ಪಶ್ಚಿಮಿ ರೂಪದಿಂದ ಹುಟ್ಟಿದೆ ಎಂದು ವಿದ್ವಾಂಸರು ಊಹಿಸಿದ್ದಾರೆ. ಹಾಗೆಯೆ ಕೆಲವರು ಬ್ರಾಚಡ್ ಅಪಭ್ರಂಶದಿಂದ, ಗುರ್ಜರ ಅಪಭ್ರಂಶದಿಂದ ಜನಿಸಿದೆಯೆಂದು ವಾದಿಸುತ್ತಾರೆ. ಈ ಭಾಷೆಯನ್ನು ಗುಜರಾತ್ ಹಾಗೂ ರಾಜಸ್ಥಾನಗಳಲ್ಲಿನ ಸುಮಾರು ಮೂರು ಕೋಟಿಗೂ ಅಧಿಕ ಜನ ಮಾತನಾಡುತ್ತಾರೆ. ಈ ಭಾಷೆಯನ್ನು ಬರೆಯಲು ನಾಗರೀ ಲಿಪಿಯಿಂದ ಬೆಳೆದು ಬಂದಂತಹ ಇನ್ನೊಂದು ಬೇರೆ ಲಿಪಿಯನ್ನು ಬಳಸುತ್ತಾರೆ. ಅಂತೆಯೇ ಈ ಭಾಷೆಯು ಬಹುಪಾಲು ರಾಜಸ್ಥಾನಿ ಭಾಷೆಯನ್ನು ಹೋಲುತ್ತದೆ.

ಈ ಭಾಷೆಯ ಸಾಹಿತ್ಯವು ಹನ್ನೆರಡನೆಯ ಶತಮಾನದಿಂದ ಈಚೆಗೆ ಬೆಳೆದು ಬಂದಿದೆ. ಈ ಕಾಲದಲ್ಲಿ ಆರಂಭಗೊಂಡ ಸಾಹಿತ್ಯವು ಪ್ರಮುಖವಾಗಿ ನಾಲ್ಕು ಕಾಲಘಟ್ಟದಲ್ಲಿ ಬೆಳೆದು ವಿಕಾಸ ಹೊಂದಿದೆ. ಆ ನಾಲ್ಕು ಘಟ್ಟಗಳೆಂದರೆ -

1. ಕ್ರಿ. ಶ. 1250 ರಿಂದ ಕ್ರಿ. ಶ. 1456 ರ ವರೆಗಿನ ಮೊದಲನೆಯ ಘಟ್ಟ.
2. ಕ್ರಿ. ಶ. 1450 ರಿಂದ ಕ್ರಿ. ಶ. 1650 ರ ವರೆಗಿನ ಎರಡನೆಯ ಘಟ್ಟ.
3. ಕ್ರಿ. ಶ. 1650 ರಿಂದ ಕ್ರಿ. ಶ. 1825ರ ವರೆಗಿನ ಮೂರನೆ ಘಟ್ಟ
4. ಕ್ರಿ. ಶ. 1825 ರಿಂದ ನಂತರದ ನಾಲ್ಕನೆ ಘಟ್ಟ.

ಗುಜರಾತಿ ಸಾಹಿತ್ಯದ ಮೊದಲನೆಯ ಘಟ್ಟ ಜೈನ ಮತದಿಂದ ಪ್ರಭಾವಿತವಾದುದಾಗಿದೆ. ಈ ಒಂದು ಕಾಲಘಟ್ಟದಲ್ಲಿನ ಬಹುಪಾಲು ಕವಿಗಳು ಜೈನರೆ ಆಗಿದ್ದಾರೆ. ಅವರುಗಳಲ್ಲಿ ಜಿನಪದ್ಮ ಸೂರಿ, ರಾಜಶೇಖರ ಸೂರಿ ಮತ್ತು ಜಯಶೇಖರ ಸೂರಿ ಇವರುಗಳು ಬಹಳ ಪ್ರಮುಖರಾಗಿದ್ದಾರೆ. ಈ ಕವಿಗಳು 'ರಾಸ' ಹಾಗೂ 'ಫಾಗು' ಎಂಬ ಗೀತರಚನೆಗಳನ್ನು ಬರೆದು ಪ್ರಚಾರಪಡಿಸಿದರು. ಹಾಗೆಯೆ ಮಾಣಿಕ್ಯ ಸುಂದರಸೂರಿ ಮತ್ತು ಪೃಥ್ವೀಚಂದ್ರ ಇವರುಗಳು ಗದ್ಯ ಪ್ರಕಾರದಲ್ಲಿ ಸಾಹಿತ್ಯ ರಚನೆಗೆ ತೊಡಗಿದರು. ಇವರುಗಳು ಅನೇಕ ಸುಂದರ

ಸರಳ ಕಥೆಗಳನ್ನು ಬರೆದರು. ಈ ಒಂದು ಕಾಲಘಟ್ಟದಲ್ಲಿ ಬಹಳಷ್ಟು ವೀರತ್ವದ ಕಥೆಗಳು ಹಾಗೂ ಸುಂದರ ಕಲ್ಪಿತ ಕಥೆಗಳು ಬೆಳೆದವು.

ಎರಡನೆಯ ಘಟ್ಟದಲ್ಲಿ ಗುಜರಾತಿ ಸಾಹಿತ್ಯವು ಹಿಂದೂ ಧರ್ಮದಿಂದ ಸಾಕಷ್ಟು ಪ್ರೇರಣೆ ಪಡೆಯಿತು. ಹಾಗಾಗಿ ಈ ಕಾಲದಲ್ಲಿ ಅನೇಕ ಪುರಾಣಗಳು ಮತ್ತು ಮಹಾಕಾವ್ಯಗಳು ಸೃಷ್ಟಿಯಾದವು. ಪ್ರಮುಖ ಕವಿಗಳಾದ ನರಸಿಂಹ ಮೆಹ್ತಾ ಮತ್ತು ಕವಿಯತ್ರಿ ಮೀರಾಬಾಯಿ ಇವರುಗಳು ಅನನ್ಯವಾದ ಭಕ್ತಿಕಾವ್ಯಗಳನ್ನು ರಚಿಸಿದ್ದಾರೆ. ನರಸಿಂಹ ಮೆಹ್ತಾನನ್ನು ಗುಜರಾತಿ ಕವಿತೆಯ ಜನಕನೆಂದು ಕರೆಯುತ್ತಾರೆ. ಈತನು 'ಗೋವಿಂದ ಗಮನ' ಹಾಗೂ 'ಸಾಧಾಮಚರಿತೆ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಮೀರಾಬಾಯಿಯು ತನ್ನ ಆರಾಧ್ಯ ದೈವವಾದ ಕೃಷ್ಣನನ್ನು ಕುರಿತಂತೆ ಅನೇಕ ಭಕ್ತಿ ರಚನೆಗಳನ್ನು ರಚಿಸಿದ್ದಾಳೆ. ಎರಡನೆಯ ಕಾಲಘಟ್ಟದಲ್ಲಿ ಕೂಡ ಸಾಹಿತ್ಯವು ತುಂಬಾ ಹುಲುಸಾಗಿ ಬೆಳೆದಿದೆ. ಈ ಕಾಲದ ಪ್ರಮುಖ ಕವಿ 'ಭಾಲ' ಇವನು 'ನಳಾಖ್ಯಾನ', 'ರಾಮಚರಿತ್ರೆ' ಹಾಗೂ ಸಂಸ್ಕೃತ ಬಾಣನ ಕಾದಂಬರಿಯನ್ನು ಅನುಸರಿಸಿ ಗುಜರಾತಿಯಲ್ಲಿ 'ಕಾದಂಬರಿ' ಈ ಮೊದಲಾದ ಅಮೂಲ್ಯ ಕೃತಿಗಳನ್ನು ರಚಿಸಿದ್ದಾನೆ.

ಮೂರನೆಯ ಕಾಲಘಟ್ಟದಲ್ಲಿಯೂ ಕೂಡ ಸಮೃದ್ಧ ಸಾಹಿತ್ಯದ ರಚನೆ ಆಗಿದೆ. ಈ ಕಾಲದ ಪ್ರಮುಖ ಕವಿ ಪ್ರೇಮಾನಂದ. ಇವನು ತನ್ನದೆ ಆದ ವಿಶಿಷ್ಟಶೈಲಿಯ ಮುಖಾಂತರ ಗುಜರಾತಿ ಸಾಹಿತ್ಯಕ್ಕೆ ಒಂದು ಮಹತ್ವದ ಆಯಾಮವನ್ನು ತಂದುಕೊಟ್ಟಂತಹ ಕವಿ. ಇವನ ಕಾಲದಲ್ಲಿ ಅನನ್ಯವಾದ ಸಾಹಿತ್ಯ ಸೃಷ್ಟಿಯಾಗಿರುವುದನ್ನು ಕಾಣಬಹುದಾಗಿದೆ.

ನಾಲ್ಕನೆಯ ಕಾಲಘಟ್ಟ ಗುಜರಾತಿಯ ಆಧುನಿಕ ಕಾಲಘಟ್ಟವಾಗಿದೆ. ಈ ಹಂತದ ಗುಜರಾತಿ ಸಾಹಿತ್ಯದ ಮೇಲೆ ಪಾಶ್ಚಾತ್ಯರ ಪ್ರಭಾವ ಬಿದ್ದಿತು. ಆ ಪರಿಣಾಮವಾಗಿ ಸಾಹಿತ್ಯ ತನ್ನ ದಿಕ್ಕನ್ನೆ ಬದಲಾಯಿಸಿಕೊಂಡಿತು. ಆಧುನಿಕ ಪ್ರಕಾರಗಳಾದ ಕವನ, ಕಥೆ, ಕಾದಂಬರಿ ಈ ಮೊದಲಾದ ಪ್ರಕಾರಗಳ ಮೂಲಕ ಅಭಿವ್ಯಕ್ತಗೊಳ್ಳತೊಡಗಿತು. ಈ ಆಧುನಿಕ ಗುಜರಾತಿ ಸಾಹಿತ್ಯದ ಪ್ರಥಮ ಕವಿಗಳಲ್ಲಿ 'ದಲ್ಪತ್‌ರಾಮ್' ಹಾಗೂ 'ನರ್ಮದ' ಇವರು ಬಹಳ ಮುಖ್ಯರಾಗುತ್ತಾರೆ. ಜೊತೆಗೆ ನಂದಶಂಕರ್ ಮತ್ತು ಗೋವರ್ಧನರಾಮ್‌ತ್ರಿಪಾಠಿ

ಇವರುಗಳೂ ಕೂಡ ಬಹಳ ದೊಡ್ಡ ಲೇಖಕರೇ ಆಗಿದ್ದಾರೆ. ನಂದಶಂಕರ್ ಅವರ 'ಕರನಘೇಲೊ' ಎಂಬ ಗುಜರಾತಿಯ ಪ್ರಥಮ ಕಾದಂಬರಿಯಾಗಿದೆ. ಹಾಗೆಯೆ ಗೋವರ್ಧನರಾಮ್ ತ್ರಿಪಾಠಿಯವರ 'ಸರಸ್ವತೀಚಂದ್ರ' ಎಂಬ ಕಾದಂಬರಿಯು ನಾಲ್ಕು ಸಂಪುಟಗಳ ಬೃಹತ್ ಕೃತಿಯಾಗಿದ್ದು, ತುಂಬಾ ಜನಪ್ರಿಯತೆ ಗಳಿಸಿದೆ. ಗುಜರಾತಿ ಸಣ್ಣಕಥೆಗಳ ಕ್ಷೇತ್ರದಲ್ಲಿ ಕೆ. ಎಂ. ಮುನ್ಷಿಯವರು ಪ್ರಮುಖರಾಗಿದ್ದಾರೆ.



# ಬಂಗಾಳಿ

ಬಂಗಾಳಿಯು ಭಾರತೀಯ ಪ್ರಮುಖ ಭಾಷೆಗಳಲ್ಲಿ ಒಂದು. ಇದು ಮಾಗಧಿ ಅಪಭ್ರಂಶದಿಂದ ವಿಕಾಸಹೊಂದಿ ಬೆಳೆದು ಬಂದಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಭಾಷೆಯು ಪಶ್ಚಿಮ ಬಂಗಾಳ ರಾಜ್ಯದ ಆಡಳಿತ ಭಾಷೆಯಾಗಿದೆ. ಪಶ್ಚಿಮಬಂಗಾಳ ಹಾಗೂ ಬಾಂಗ್ಲಾದೇಶದ ಗಡಿಭಾಗಗಳಲ್ಲಿನ ಸುಮಾರು ನಾಲ್ಕು ಕೋಟಿಗೂ ಅಧಿಕ ಜನ ಈ ಭಾಷೆಯನ್ನು ಮಾತನಾಡುತ್ತಾರೆ. ಈ ಭಾಷೆಯು ಕ್ರಿ. ಶ. 8ನೇ ಶತಮಾನದಲ್ಲಿ ಜನಿಸಿ ವಿಕಾಸಗೊಂಡಿದೆ ಎಂದು ಹೇಳಲಾಗುತ್ತಿದೆ. ಈ ಭಾಷೆಯ ಸಾಹಿತ್ಯವು ಕ್ರಿ. ಶ. 12ನೇ ಶತಮಾನದಿಂದ ಬೆಳೆದಿದೆ. ಆರಂಭದ ಹಂತದಲ್ಲಿ ಈ ಭಾಷೆಯ ಸಾಹಿತ್ಯವೂ ಕೂಡ ಮತಧರ್ಮಾವಲಂಬಿತವಾದುದೇ ಆಗಿದೆ. 12ನೇ ಶತಮಾನದಲ್ಲಿ ಇಲ್ಲಿ 'ನಾಥ ಸಾಹಿತ್ಯ'ವು ಬೆಳೆಯಿತು. ಇದು ಬೌದ್ಧಮತದ ಪ್ರೇರಣೆ ಹಾಗೂ ಪ್ರಭಾವದಿಂದ ಬೆಳೆದು ಬಂದಂತಹದ್ದಾಗಿದೆ. ಈ ನಂತರದ ಕಾಲದಲ್ಲಿ ಬಂಗಾಳಿ ಸಾಹಿತ್ಯ ವೈಷ್ಣವ ಪಂಥದ ಪ್ರಭಾವ ಪಡೆಯಿತು. ಈ ಕಾಲದಲ್ಲಿ ಅಂದರೆ ಕ್ರಿ. ಶ. 14ನೇ ಶತಮಾನದಲ್ಲಿ ಚಂಡಿದಾಸ್ ಎಂಬುವವರು ಬಹಳ ಪ್ರಮುಖರಾಗುತ್ತಾರೆ. ಇವರು ಸಾವಿರಾರು ಸುಮಧುರ ಗೀತೆಗಳನ್ನು ರಚಿಸಿದ್ದಾರೆ.

ಕ್ರಿ. ಶ. 15ನೇ ಶತಮಾನದಲ್ಲಿ ರಾಮಾಯಣದ ಭಾಷಾಂತರ ಮತ್ತು ರಾಮಾಯಣ ಆಧಾರಿತ ಕೃತಿಗಳ ರಚನೆ ಬಂಗಾಳಿಯಲ್ಲಿ ಆರಂಭವಾಯಿತು. 'ಕೃತ್ತಿದಾಸ್‌ಓಝಾ' ಎಂಬುವನು ರಾಮಾಯಣವನ್ನು ಬಂಗಾಳಿಯಲ್ಲಿ ಬರೆದನು. ಇವನ ನಂತರ ಅನೇಕ ಸಂಸ್ಕೃತ ಕಾವ್ಯಗಳು ಬಂಗಾಳಿಗೆ ಅನುವಾದಗೊಂಡವು. ಅವುಗಳಲ್ಲಿ "ಮಂಗಳ ಕಾವ್ಯಗಳು" ಎಂಬುವು ಬಹಳ ಮುಖ್ಯವಾದವುಗಳಾಗಿವೆ. ಈ ಕಾವ್ಯಗಳು ದೇವ-ದೇವಿಯರ ಹೋರಾಟದ ವರ್ಣನೆಗಳಾಗಿವೆ. ಇವು ಮಧ್ಯಕಾಲೀನ ಬಂಗಾಳಿ ಸಾಹಿತ್ಯದಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದಿವೆ.

ಇದೇ ಹದಿನೈದನೆ ಶತಮಾನದ ಅಂತ್ಯಭಾಗ ಮತ್ತು ಹದಿನಾರನೆ ಶತಮಾನದ ಆರಂಭ ಕಾಲದ ನಡುವೆ ಶ್ರೀ ಚೈತನ್ಯರು ಬಂಗಾಳಿ ನೆಲದಲ್ಲಿ

ಕಾಣಿಸಿಕೊಂಡರು. ಇವರು ತಮ್ಮ ಜೀವನ ಸಾಧನೆ ಹಾಗೂ ಉಪದೇಶಗಳಿಂದ ಬಂಗಾಳಿಯ ಸಾಂಸ್ಕೃತಿಕ ಮತ್ತು ಸಾಹಿತ್ಯಕ ವಲಯದ ಮೇಲೆ ಅಪಾರವಾದ ಪ್ರಭಾವವನ್ನು ಬೀರಿದರು. ಜೊತೆಗೆ ವೈಷ್ಣವ ಪಂಥಕ್ಕೆ ಹೊಸ ಚಾಲನೆಯನ್ನು ಕೊಟ್ಟರು. ಆ ಪರಿಣಾಮವಾಗಿ ಅತ್ಯುತ್ತಮ ಸಾಹಿತ್ಯ ಬಂಗಾಳಿಯಲ್ಲಿ ನಿರ್ಮಾಣವಾಯಿತು. ಶ್ರೀಚೈತನ್ಯನ ಅನೇಕ ಜನ ಶಿಷ್ಯರು ಸ್ವತಃ ಕವಿಗಳಾಗಿ ಶ್ರೇಷ್ಠವಾದ ಭಾವಗೀತೆಗಳು, ಭಕ್ತಿ ರಚನೆಗಳನ್ನು ರಚಿಸಿದರು. ಅನೇಕ ಪ್ರೇಮಗೀತೆಗಳು ಕೂಡ ಈ ಕಾಲದಲ್ಲಿ ರಚನೆಯಾದವು.

ಆಧುನಿಕ ಬಂಗಾಳಿ ಸಾಹಿತ್ಯವು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಉದಯವಾಗತೊಡಗಿತು. ಬಹುತೇಕ ಎಲ್ಲ ಭಾರತೀಯ ಸಾಹಿತ್ಯಗಳಂತೆ ಆಧುನಿಕ ಬಂಗಾಳಿ ಸಾಹಿತ್ಯದ ಮೇಲೂ ಕೂಡ ಪಾಶ್ಚಿಮಾತ್ಯರ ಪ್ರಭಾವ ಬಿದ್ದಿತು. ಕ್ರೈಸ್ತಮತ ಪ್ರಚಾರಕ್ಕಾಗಿ ಬಂದ ಯೂರೋಪಿಯನ್ ಪಾದ್ರಿಗಳು ಸ್ವತಃ ಬಂಗಾಳಿಯನ್ನು ಕಲಿತು ಬಂಗಾಳಿಯಲ್ಲಿ ಬೈಬಲನ್ನು ರಚಿಸಿದರು. ಏಸುಕ್ರಿಸ್ತನ ಜೀವನ ಉಪದೇಶಗಳನ್ನು ಸಾರುವ ಅನೇಕ ಚಿಕ್ಕಪುಟ್ಟ ಪುಸ್ತಕಗಳನ್ನು ಪ್ರಕಟಿಸಿದರು. ಅಷ್ಟೇ ಅಲ್ಲದೆ ಅನೇಕ ಜನರು ಬಂಗಾಳಿ ಭಾಷೆಯನ್ನು ಕುರಿತಂತೆ ಅಧ್ಯಯನ ನಡೆಸಿದ್ದರು, ಅನೇಕ ಹೊಸ ಹೊಸ ಸಂಶೋಧನೆಗಳನ್ನು ಆ ಕುರಿತಂತೆ ನಡೆಸಿದರು. ಬಂಗಾಳಿ-ಇಂಗ್ಲೀಷ್ ನಿಘಂಟುಗಳನ್ನು ರಚಿಸಿದರು. ವ್ಯಾಕರಣಗಳನ್ನು ರಚಿಸಿದರು. ಇವರುಗಳ ಜೊತೆಯಲ್ಲಿ ಇಂಗ್ಲೀಷ್ ಶಿಕ್ಷಣ ಪಡೆದಂತಹ ಅನೇಕ ಜನ ಬಂಗಾಳಿ ಯುವಕರು ಹೊಸ ಪ್ರೇರಣೆ ಮತ್ತು ಪ್ರಭಾವಗಳೊಂದಿಗೆ ಸಾಹಿತ್ಯ ರಚನೆಗೆ ತೊಡಗಿಕೊಂಡರು.

ಕಲ್ಕತ್ತಾದಲ್ಲಿ ಯೂರೋಪಿನ್ನರು 1800 ರಲ್ಲಿ ಸ್ಥಾಪಿಸಿದ ಫೋರ್ಟ್ ವಿಲಿಯಂ ಕಾಲೇಜು ಬಂಗಾಳಿ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನೇ ನೀಡಿತು. ಈ ಕಾಲೇಜಿನ ಮುಖಾಂತರವಾಗಿ ನೂರಾರು ಜನರಿಗೆ ಆಧುನಿಕ ವಿದ್ಯಾಭ್ಯಾಸ ಸೌಲಭ್ಯ ದೊರೆಯಿತು. ಹಾಗಾಗಿ ಬಂಗಾಳಿ ಸಾಹಿತ್ಯವು ತುಂಬಾ ಶಕ್ತಿಶಾಲಿಯಾಗಿ ಬೆಳೆಯತೊಡಗಿತು. ಅನೇಕ ಇಂಗ್ಲೀಷ್ ಕೃತಿಗಳು ಬಂಗಾಳಿಗೆ ಅನುವಾದಗೊಂಡವು. ಜೊತೆಗೆ ಬಂಗಾಳಿ ನೆಲದ ವಾಸನೆ ಇರುವ ನೂರಾರು ಕವನ ಸಂಕಲನಗಳು, ಕಾದಂಬರಿಗಳು, ನಾಟಕಗಳು, ಸಣ್ಣಕಥಾಸಂಕಲನಗಳು ರೂಪುಗೊಂಡವು. ಅನೇಕ ಆಧುನಿಕ ಬಂಗಾಳಿ ಮಹಾಕಾವ್ಯಗಳೂ ಕೂಡ

ಸೃಷ್ಟಿಯಾದವು. ಯೂರೋಪಿಯನ್ ಪಾದ್ರಿ ವಿಲಿಯಂಕ್ಯಾರಿ ಎಂಬುವವನು ಬಂಗಾಳಿ ಭಾಷೆಯನ್ನು ಆಳವಾಗಿ ಅಭ್ಯಸಿಸಿ ಬಂಗಾಳಿ-ಇಂಗ್ಲೀಷ್ ನಿಘಂಟು ಮತ್ತು ವ್ಯಾಕರಣವನ್ನು ರಚಿಸಿದನು.

ಬಂಗಾಳದ ಪ್ರಮುಖ ಕವಿಯಾದ 'ಮೈಕಲ್ ಮಧುಸೂಧನದತ್ತ' ಅವರು ಇಂಗ್ಲೀಷ್ ವಿದ್ಯಾಭ್ಯಾಸ ಪಡೆದು, ಬಂಗಾಳಿ ಸಾಹಿತ್ಯದಲ್ಲಿ ಆಧುನಿಕ ಮಹಾಕಾವ್ಯವಾದ 'ಮೇಘನಾದಬಧ್' ಎಂಬ ಕೃತಿಯನ್ನು ರಚಿಸಿದರು. ಜೊತೆಗೆ ಅನೇಕ ನಾಟಕಗಳನ್ನು ಕೂಡ ರಚಿಸಿದರು. ಇವರ ನಂತರ ಬಂಗಾಳಿಯ ಪ್ರಮುಖ ಕವಿ ಎನಿಸಿದ 'ಬಂಕಿಮಚಂದ್ರ'ರು ಬಂಗಾಳಿ ಕಾದಂಬರಿ ಕ್ಷೇತ್ರದಲ್ಲಿ ಅಪಾರವಾಗಿ ಕೆಲಸಮಾಡಿದರು. ಇವರ ಪ್ರಥಮ ಕಾದಂಬರಿ 'ದುರ್ಗೇಶ ನಂದಿನಿ' ಎಂಬುದು ಇಡೀ ಬಂಗಾಳಿ ಓದುಗರನ್ನು ಮಂತ್ರಮುಗ್ಧರನ್ನಾಗಿಸಿತು. ಜೊತೆಗೆ ಅನೇಕ ಭಾರತೀಯ ಭಾಷೆಗಳಿಗೂ ಕೂಡ ಇದು ಅನುವಾದಗೊಂಡು ಜನಪ್ರಿಯವಾಯಿತು. ಈ ಕಾದಂಬರಿಯ ಜೊತೆಗೆ ಅವರು 'ಆನಂದಮಠ', 'ರಾಜಸಿಂಹ' ಮತ್ತು 'ವಿಷವೃಕ್ಷ' ಇವೆ ಮೊದಲಾದ ಅತ್ಯಮೂಲ್ಯ ಕಾದಂಬರಿಗಳನ್ನು ರಚಿಸಿದರು.

ಆಧುನಿಕ ಬಂಗಾಳಿ ಸಾಹಿತ್ಯದ ಮತ್ತೊಬ್ಬ ಶ್ರೇಷ್ಠ ಕಾದಂಬರಿಕಾರ ಎಂದರೆ 'ಶರತ್‌ಚಂದ್ರ' ಇವರೂ ಕೂಡ ಬಂಕಿಮಚಂದ್ರರ ರೀತಿಯಲ್ಲೇ ಬಹುವೇಗ ಜನಪ್ರಿಯತೆಯನ್ನು ಪಡೆದರು. ಇವರು ರಚಿಸಿದ ಪ್ರಮುಖ ಕಾದಂಬರಿಗಳಾದ 'ಬಿಂದೂರ್ ಸೆಲೆ', 'ನಿಷ್ಕೃತಿ' ಹಾಗೂ 'ಶ್ರೀಕಾಂತ' ಈ ಮೊದಲಾದವುಗಳು ತುಂಬಾ ಜನಪ್ರಿಯತೆಯನ್ನು ಗಳಿಸಿಕೊಂಡಿವೆ.

ಆಧುನಿಕ ಬಂಗಾಳಿ ಸಾಹಿತ್ಯ ಎಲ್ಲ ರೀತಿಯಿಂದಲೂ ಅತ್ಯುನ್ನತಿಯನ್ನು ಮುಟ್ಟಿದ್ದು ವಿಶ್ವಕವಿ 'ರವೀಂದ್ರನಾಥ ಠಾಕೂರ' ರಿಂದ ಎಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ. ಸಾಹಿತ್ಯ ಸಂತಸಂತೆ ಸದಾಕಾಲ ಸಾಹಿತ್ಯವನ್ನೆ ಧ್ಯಾನಿಸುತ್ತ ವಿಶ್ವಮಾನ್ಯರಾಗಿ ಬೆಳೆದ ಶ್ರೀ ರವೀಂದ್ರನಾಥ ಠಾಕೂರರು ಕಾದಂಬರಿ, ಸಣ್ಣಕತೆ, ನಾಟಕ, ಭಾವಗೀತೆ ಈ ಎಲ್ಲ ಪ್ರಕಾರಗಳಲ್ಲಿಯೂ ಕೂಡ ತಮ್ಮ ಅದಮ್ಯವಾದ ಸಾಹಿತ್ಯ ಕೃಷಿಯನ್ನು ನಡೆಸಿದ್ದಾರೆ. ಇವರು ಬಂಗಾಳಿಯಲ್ಲಿ ರಚಿಸಿ, ನಂತರ ಇಂಗ್ಲೀಷ್‌ಗೆ ಭಾಷಾಂತರ ಮಾಡಿದ 'ಗೀತಾಂಜಲಿ' ಎಂಬ ಕೃತಿಗೆ ಪ್ರಪಂಚದ ಶ್ರೇಷ್ಠ ಪಾರಿತೋಷಕವಾದ 'ನೊಬೆಲ್ ಪ್ರಶಸ್ತಿ' ದೊರೆತಿದೆ. ಈ ಒಂದು

ಕೃತಿಯಿಂದ ರವೀಂದ್ರನಾಥ ಠಾಕೂರ್ ಹಾಗೂ ಬಂಗಾಳಿ ಸಾಹಿತ್ಯ ಈ ಎರಡೂ ಕೂಡ ವಿಶ್ವಮಾನ್ಯತೆಯನ್ನು ಪಡೆದುಕೊಂಡಂತಾಯಿತು.

ಶ್ರೀ ರವೀಂದ್ರನಾಥ ಠಾಕೂರರು ನಮ್ಮ ರಾಷ್ಟ್ರಗೀತೆಯಾದ 'ಜನಗಣಮನ'ದ ಕರ್ತೃ ಕೂಡ ಹೌದು. ಇವರ ಇನ್ನೊಂದು ಮಹತ್ಕೃತಿ ಎಂದರೆ 'ಗೋರಾ' ಇದು ಬಂಗಾಳಿ ಸಾಹಿತ್ಯದ ಮಹತ್ವದ ಕಾದಂಬರಿ ಎಂದು ಹೆಸರುವಾಸಿಯಾಗಿದೆ.

ಠಾಕೂರರ ಕಾಲದಲ್ಲಿಯೆ ಬರವಣಿಗೆಗೆ ತೊಡಗಿಕೊಂಡ ಮತ್ತೊಬ್ಬ ಲೇಖಕ 'ದೀನಬಂಧುಮಿತ್ರ' ಇವರು ಪ್ರಖ್ಯಾತ ನಾಟಕಕಾರರಾಗಿ ಹೆಸರು ಮಾಡಿದರು. ಇವರು ರಚಿಸಿದ ಪ್ರಖ್ಯಾತ ನಾಟಕ 'ನೀಲ್ದಾರ್ ಪಾರ್ಕ್ಸ್' ಎಂಬುದು. ಈ ನಂತರದ ಕಾಲದ ಬಂಗಾಳಿ ಸಾಹಿತಿಗಳಲ್ಲಿ ಸುರೇಂದ್ರನಾಥ ದತ್ತ, ಮಾಣಿಕ್‌ಬ್ಯಾನರ್ಜಿ, ಭಿಭೂತಿಭೂಷಣಭ್ಯಾನರ್ಜಿ, ತಾರಾಶಂಕರ ಬ್ಯಾನರ್ಜಿ, ಪ್ರೇಮೇಂದ್ರ ಮಿತ್ರ, ಗುಜರಾಲ್ ಇಸ್ಲಾಂ, ಬುದ್ಧದೇವ ಬೋಸ್ ಈ ಮೊದಲಾದವರು ಬಹಳ ಪ್ರಮುಖರಾಗಿದ್ದಾರೆ. ಇವರುಗಳು ತಮ್ಮ ಅತ್ಯಮೂಲ್ಯ ಕಾದಂಬರಿಗಳು ಹಾಗೂ ಕವಿತೆಗಳನ್ನು ಬಂಗಾಳಿ ಸಾಹಿತ್ಯಕ್ಕೆ ನೀಡಿ ಆ ಸಾಹಿತ್ಯ ಜನಪ್ರಿಯವಾಗಲು ಕಾರಣರಾಗಿದ್ದಾರೆ. ಹಾಗೆಯೆ ನಾಟಕಗಳ ಕ್ಷೇತ್ರದಲ್ಲಿ ಜಿ. ಸಿ. ಘೋಷ್, ದ್ವಿಜೇಂದ್ರರಾಯ್ ಈ ಮೊದಲಾದವರು ಬಹಳ ಮಹತ್ವದ ಕೆಲಸ ಮಾಡಿದ್ದಾರೆ.

ಭಾರತೀಯ ಸಾಹಿತ್ಯಕ ವಲಯದಲ್ಲಿಯೆ ಅಗ್ರಮಾನ್ಯ ಸ್ಥಾನದಲ್ಲಿರುವುದೆಂದರೆ ಈ ಬಂಗಾಳಿ ಸಾಹಿತ್ಯವೆಂದೆ ಹೇಳಬೇಕು. ಬಹುಪಾಲು ಈ ಬಂಗಾಳಿ ಕೃತಿಗಳು ಭಾರತೀಯ ಎಲ್ಲ ಭಾಷೆಗಳಿಗೂ ಭಾಷಾಂತರ ಹೊಂದಿ ಜನಪ್ರಿಯವಾಗಿರುವುದನ್ನು ನಾವು ಕಾಣಬಹುದಾಗಿದೆ.



# ರಾಜಸ್ಥಾನಿ

ರಾಜಸ್ಥಾನಿಯು ಪ್ರಮುಖ ಭಾರತೀಯ ಭಾಷೆಗಳಲ್ಲಿ ಒಂದು. ಇದು ರಾಜಸ್ಥಾನದ ಆಡಳಿತ ಭಾಷೆ. ಶೌರಸೇನಿ ಪ್ರಾಕೃತದ ನಾಗರ ಅಪಭ್ರಂಶದಿಂದ ವಿಕಾಸಗೊಂಡು ಇದು ಬೆಳೆದಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈ ಭಾಷೆಯನ್ನು ರಾಜಸ್ಥಾನದ ಎರಡೂವರೆ ಕೋಟಿಗೂ ಅಧಿಕ ಜನ ಮಾತನಾಡುತ್ತಾರೆ. ಇದಕ್ಕೆ ಮಾರವಾಡಿ, ಜಯಪುರಿ, ಮೇವಾತಿ ಎಂಬಿವೆ ಮೊದಲಾದ ಉಪಭಾಷೆಗಳಿವೆ. ಕ್ರಿ. ಶ. 13 ಮತ್ತು 14ನೇ ಶತಮಾನದಲ್ಲಿ ಈ ಭಾಷೆಯ ಸಾಹಿತ್ಯ ಆರಂಭಗೊಂಡಿದೆ. ಆದರೆ ಕೆಲವು ವಿದ್ವಾಂಸರು ಹನ್ನೊಂದನೆ ಶತಮಾನದ ಸುಮಾರಿನಲ್ಲಿಯೆ ಈ ಭಾಷೆಯಲ್ಲಿ ಸಾಹಿತ್ಯ ರಚನೆ ಆರಂಭವಾಗಿದೆ ಎಂದು ಹೇಳುತ್ತಾರೆ. ಆದರೆ ಇದಕ್ಕೆ ಯಾವುದೆ ಖಚಿತವಾದ ಆಧಾರಗಳು ದೊರೆಯುವುದಿಲ್ಲ.

ರಾಜಸ್ಥಾನಿಯ ಮೊದಲನೆಯ ಕಾಲಘಟ್ಟದ ಸಾಹಿತ್ಯವು ಬಹುಪಾಲು ಜೈನಧರ್ಮದಿಂದ ಪ್ರೇರಣೆ ಪಡೆದುದಾಗಿದೆ. ಜೈನಧರ್ಮಕ್ಕೆ ಸಂಬಂಧಿಸಿದಂತೆ ಗದ್ಯ-ಪದ್ಯ ಪ್ರಕಾರಗಳೆರಡರಲ್ಲಿಯೂ ಬಹಳ ಮಹತ್ವದ ಕೃತಿಗಳು ಈ ಕಾಲದಲ್ಲಿ ರಚನೆಗೊಂಡಿವೆ. ಈ ಕಾಲದ ಪ್ರಮುಖ ಕವಿಗಳಾದ ಪದ್ಮನಾಭ, ಮಿಹೂಸುಜೋ ಈ ಮೊದಲಾದವರು ಅತ್ಯಮೂಲ್ಯವಾದ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಅದೇ ರೀತಿ ರಾಜಸ್ಥಾನಿ ಸಾಹಿತ್ಯದಲ್ಲಿ ಜನಪ್ರಿಯ ಪ್ರಕಾರಗಳಾದ 'ದುಹಾ' ಮತ್ತು 'ಗೀತೆ'ಗಳಲ್ಲಿ ಅನೇಕ ಕೃತಿಗಳು ರಚನೆಯಾಗಿ ಬಹಳ ಕಾಲದವರೆಗೆ ಮುಂದುವರೆದು ರಚನೆಯಾಗುತ್ತಲೆ ಬಂದಿವೆ. ಬಹುಪಾಲು ಇದೇ ಪ್ರಕಾರದ ಸಾಹಿತ್ಯವು ಆಧುನಿಕ ಕಾಲದವರೆಗೆ ಅಂದರೆ ಹತ್ತೊಂಬತ್ತು ಇಪ್ಪತ್ತನೇ ಶತಮಾನದವರೆಗೆ ರಚನೆಯಾಗುತ್ತಲೆ ಬಂದಿದೆ.

ರಾಜಸ್ಥಾನಿಯ ಆಧುನಿಕ ಸಾಹಿತ್ಯದ ಆರಂಭ. 1940ರ ಸುಮಾರಿನಲ್ಲಿ ಆರಂಭವಾಯಿತು. ರಾಜಸ್ಥಾನಿ ಆಧುನಿಕ ಸಾಹಿತ್ಯಕ್ಕೂ ಕೂಡ ಇತರೆಲ್ಲ ಭಾರತೀಯ ಭಾಷೆಗಳ ಸಾಹಿತ್ಯದಂತೆ ಪಾಶ್ಚಿಮಾತ್ಯ ಪ್ರಭಾವವೆ ಪ್ರೇರಣೆಯಾಗಿರುವುದು ಕಂಡು ಬರುತ್ತದೆ. 'ಚಂದ್ರಸಿಂಗ್' ಎಂಬುವರು ರಚಿಸಿದ

ಾದ್ವಿ' ಎಂಬ ಕೃತಿಯು ಆಧುನಿಕ ರಾಜಸ್ಥಾನಿಯ ಮೊದಲ ಕೃತಿಯಾಗಿದೆ. ದೊಂದು ಭಾವಗೀತೆಗಳ ಸಂಕಲನವಾಗಿದೆ. ಈ ನಂತರ ಆರ್. ಕಲ್ಲಾತ್, ನ್. ಎಸ್. ಭಟ್ಟ ಹಾಗೂ ಜಿ. ಎಲ್. ವ್ಯಾಸ ಈ ಮೊದಲಾದವರು ಪ್ರಮುಖ ವಿಗಳಾಗಿ ಸಾಹಿತ್ಯ ರಚನೆ ಮಾಡಿದ್ದಾರೆ. ಇವರ ಜೊತೆಗೆ ಎಂ.ಡಿ. ವ್ಯಾಸ ವರು ಸಣ್ಣಕಥೆಗಳಲ್ಲಿ ಮತ್ತು ದನ್‌ದೇತ, ವಿಜಾಜ, ರೇವ್‌ಧನ್ ಈ ೊದಲಾದವರು ಕಾದಂಬರಿ, ನಾಟಕಗಳಲ್ಲಿ ಗಣನೀಯ ಕೆಲಸ ಮಾಡಿದ್ದಾರೆ.



# ಹಿಂದಿ

ಇದು ಭಾರತದ ಪ್ರಮುಖ ಭಾಷೆ ಜೊತೆಗೆ ರಾಷ್ಟ್ರಭಾಷೆ ಕೂಡ ಆಗಿದೆ. ಹಾಗೆಯೆ ಭಾರತದಲ್ಲಿ ಅಧಿಕ ಜನ ಮಾತನಾಡುವ ಭಾಷೆಯೂ ಕೂಡ ಇ ಆಗಿದೆ. ಈ ಭಾಷೆಯನ್ನು ಭಾರತದ ಹದಿನೇಳು ಕೋಟಿಗೂ ಅಧಿಕ ಜ ಮಾತನಾಡುತ್ತಾರೆ. ಇದರಲ್ಲಿ ಪಶ್ಚಿಮ ಮತ್ತು ಪೂರ್ವ ಎಂಬ ಎರಡ ಬೇಧಗಳಿವೆ. ಕನೂಜಿ, ಬಾಂಗರು, ಬುಂದೇಲಿ, ಖಡಿಬೋಲಿ, ಬ್ರಿಜ ಮೊದಲಾದವುಗಳು ಪಶ್ಚಿಮ ಹಿಂದಿಯ ಉಪಭಾಷೆಗಳು. ಹಾಗೆಯೆ ಅವಧಿ ಬಘೇಲಿ, ಛತ್ತಿಸ್‌ಘಡ್ ಮೊದಲಾದವುಗಳು ಪೂರ್ವ ಹಿಂದಿಯ ಉ ಭಾಷೆಗಳು.

ಹಿಂದಿ ಭಾಷೆಯ ಸಾಹಿತ್ಯವು ಕ್ರಿ. ಶ. 13ನೇ ಶತಮಾನದಿಂದ ಈಚೆ ಆರಂಭಗೊಂಡು ಬೆಳೆದಿದೆ. ಈ ಆರಂಭ ಕಾಲದ ಹಿಂದಿ ಸಾಹಿತ್ಯವನ್ನು ಆದಿಸಾಹಿತ್ಯ ಅಥವಾ ಆದಿಕಾಲದ ಸಾಹಿತ್ಯ ಎಂದು ಕರೆಯುತ್ತಾರೆ. ಈ ಕಾಲದಲ್ ಜೈನರು, ನಾಥಪಂಥಿಯರು ಹಾಗೂ ಸಿದ್ಧರು ಬಹಳ ಪ್ರಮುಖವಾಗಿ ಸಾಹಿ ರಚನೆ ಮಾಡಿದವರಾಗಿದ್ದಾರೆ.

ಎರಡನೆಯ ಹಂತದ ಹಿಂದಿ ಸಾಹಿತ್ಯದಲ್ಲಿಯೂ ಕೂಡ ಬಹ ಪ್ರಧಾನವಾಗಿ ಭಕ್ತಿ ಕಾವ್ಯಗಳೆ ಮೂಡಿ ಬಂದಿವೆ. ಈ ಕಾಲದಲ್ಲಿ ಬಂದ ಭ ಕಾವ್ಯಗಳು ಎರಡು ಸ್ವರೂಪದವುಗಳಾಗಿವೆ. ಆ ಸ್ವರೂಪಗಳೆಂದರೆ ನಿರ್ಗು ಸ್ವರೂಪ ಮತ್ತು ಸಗುಣ ಸ್ವರೂಪ. ನಿರ್ಗುಣ ಸ್ವರೂಪದ ಕವಿಗಳು ಭಗವಂ ನಿರಾಕಾರಿ ಎಂದು ನಂಬಿದವರು. ಸಗುಣ ಸ್ವರೂಪದ ಕವಿಗಳು ದೇವರಿಗೆ ಒಂದ ಆಕಾರವಿದೆ. ಮಾನವನ ಎಲ್ಲ ಗುಣಗಳೂ ಅವನಿಗಿವೆ ಎಂದು. ಮಾನವ ಗುಣಗಳನ್ನು ದೇವರಿಗೆ ಆರೋಪಿಸಿದವರು.

ಈ ಎರಡೂ ಪಂಥದ ಕವಿಗಳೂ ಕೂಡ ಹಿಂದಿ ಸಾಹಿತ್ಯಕ ಅತ್ಯಮೂಲ್ಯವಾದ ಭಕ್ತಿ ರಚನೆಗಳನ್ನು ಕೊಟ್ಟಿದ್ದಾರೆ. ಅಂಥಕವಿಗಳ ಮುಖ್ಯರಾದವರೆಂದರೆ ಸಂತ ಕಬೀರ್‌ದಾಸ್ ಮತ್ತು ಗುರುನಾನಕ್. ಸಂ ಕಬೀರರು ಒಬ್ಬ ಮಹಾನ್ ಸಂತರಾಗಿ ಯಾವುದೇ ಜಾತಿ ಮತಗಳ ಬೇಧ

ಭಾವಗಳಿಲ್ಲದ ಸಮಾಜದ ಸಾಕಾರಕ್ಕಾಗಿ ಶ್ರಮಿಸಿದರು. ವಿಶ್ವಮಾನವತೆಯ ಸಂದೇಶವನ್ನು ಸಾರಿದರು. ಅವರು ಆ ನಿಟ್ಟಿನಲ್ಲಿ ರಚಿಸಿದ ಸಾವಿರಾರು ಕವಿತೆಗಳು ಹಿಂದಿ ಸಾಹಿತ್ಯದ ಅಮೂಲ್ಯ ಸಂಪತ್ತಾಗಿವೆ. ಕಬೀರರಂತೆಯೆ ಗುರುನಾನಕರು ಕೂಡ ಒಬ್ಬ ಸಂತ. ಇವರು ಸಿಖ್‌ಮತದ ಸ್ಥಾಪಕರು. ಇವರು ಕೂಡ ಅನೇಕ ಭಕ್ತಿರಚನೆಗಳನ್ನು ಬರೆದಿದ್ದಾರೆ.

ಈ ನಂತರದ ಕಾಲದಲ್ಲಿ ಹಿಂದಿ ಸಾಹಿತ್ಯದಲ್ಲಿ ಕಾಣಿಸಿಕೊಂಡ ಪ್ರಮುಖರೆಂದರೆ ಸೂರದಾಸ್ ಮತ್ತು ತುಲಸೀದಾಸ್. ಇವರಲ್ಲಿ ಸೂರ್‌ದಾಸ್‌ನು ಕೃಷ್ಣಪಾರಮ್ಯವನ್ನು ಕುರಿತಂತೆ ಕಾವ್ಯರಚಿಸಿದರೆ ತುಲಸೀದಾಸನು ಶ್ರೀ ರಾಮನನ್ನು ಕುರಿತು ಕಾವ್ಯರಚನೆ ಮಾಡಿದ್ದಾನೆ. ಸೂರದಾಸನ ಪ್ರಮುಖ ಕೃತಿ 'ಸುರಸಂಗ್ರಹ ಅಥವ ಕೃಷ್ಣಾರಾಧನ' ಎಂಬುದಾಗಿದೆ. ಅದೇ ರೀತಿ ತುಲಸೀದಾಸನ ಹೆಸರಾಂತ ಕೃತಿ 'ರಾಮಚರಿತ ಮಾನಸ' ಎಂಬುದಾಗಿದೆ. ಈ ಕೃತಿಯಂತೂ ಹಿಂದಿ ಸಾಹಿತ್ಯದ ಮಹಾಕಾವ್ಯ ಎಂದೇ ಜನಪ್ರಿಯವಾಗಿದೆ. ಜೊತೆಗೆ ಬಹುತೇಕ ಹಿಂದಿಯೇತರ ಭಾಷೆಗಳಿಗೆ ಭಾಷಾಂತರವನ್ನೂ ಕೂಡ ಹೊಂದಿ ಜನಪ್ರಿಯವಾಗಿದೆ. ಈ ಕಾವ್ಯವು ಮೂಲ ವಾಲ್ಮೀಕಿ ರಾಮಾಯಣದ ಕಥೆಯನ್ನು ಆಧಾರವಾಗಿಟ್ಟುಕೊಂಡಿದ್ದರೂ ಕೂಡ ಕಥೆಯ ಹೆಣಿಗೆ, ನಿರೂಪಣಾ ವಿಧಾನಗಳಲ್ಲಿ ಅನೇಕ ಭಿನ್ನತೆಗಳನ್ನು ಹೊಂದಿದೆ.

ಮೂರನೆಯ ಘಟ್ಟದ ಹಿಂದಿ ಸಾಹಿತ್ಯ ಕೂಡ ಸಾಕಷ್ಟು ಸಮೃದ್ಧವಾಗಿಯೆ ಮೂಡಿಬಂದಿದೆ. ಈ ಕಾಲದಲ್ಲಿ ಅನೇಕ ಭಕ್ತಿ ಕಾವ್ಯಗಳು ಜೊತೆಗೆ ಪ್ರೇಮಕಾವ್ಯಗಳು, ಐತಿಹಾಸಿಕ ಕೃತಿಗಳು ಈ ಎಲ್ಲವುಗಳೂ ಕೂಡ ರೂಪಗೊಂಡಿವೆ.

ಹಿಂದಿ ಸಾಹಿತ್ಯದ ಆಧುನಿಕ ಕಾಲವು 19ನೇ ಶತಮಾನದ ಉತ್ತರಾರ್ಧದಿಂದ ಆರಂಭವಾಗುತ್ತದೆ. ಈ ಆಧುನಿಕ ಹಿಂದಿಯ ಮೂಲಪುರುಷ ಖ್ಯಾತ ನಾಟಕಕಾರ ಹಾಗೂ ಗದ್ಯ ಬರಹಾರ ಭರತೇಂದು ಹರಿಶ್ಚಂದ್ರ. ಈತನು ಅನೇಕ ನಾಟಕಗಳನ್ನು ರಚಿಸಿದ್ದಾನೆ. ಇದೇ ಕಾಲಘಟ್ಟದಲ್ಲಿ ಬಂದ ಇತರೆ ಪ್ರಮುಖ ಕವಿಗಳೆಂದರೆ ಮೈಥಿಲಿ ಶರಣಗುಪ್ತ. ಗೋಪಾಲ ಶರಣ ಸಿನ್ಹ ಹಾಗೂ ಆರ್. ಎಸ್. ತ್ರಿಪಾಠಿ ಇವರುಗಳು ಮುಖ್ಯರಾಗುತ್ತಾರೆ.

ಆಧುನಿಕ ಹಿಂದಿ ಸಾಹಿತ್ಯದ ಪ್ರಮುಖ ಮಜಲು ಎಂದರೆ ಛಾಯಾವಾದದ ಕಾಲಘಟ್ಟ. ಇದು ಹಿಂದಿಯಲ್ಲಿಯೆ ತುಂಬಾ ಮಹತ್ವಪೂರ್ಣವಾದ ಕಾಲವೆಂದು

ಹೇಳಬಹುದು. ಈ ಕಾಲದಲ್ಲಿ ಬಂದ ಪ್ರಮುಖ ಕವಿಗಳ ಮಹಾದೇವಿವರ್ಮ, ಸುಮಿತ್ರಾನಂದನ್‌ಪಂತ್, ನಿರಾಲ, ಸೂರ್ಯಕಾಂತ್ ಹಾಗೂ ಜಯಶಂಕರ್ ಪ್ರಸಾದ್ ಇವರುಗಳು ಪ್ರಮುಖರಾಗಿದ್ದಾರೆ. ಈ ಪ್ರಮುಖ ಕೃತಿ ಜಯಶಂಕರ್ ಪ್ರಸಾದರ 'ಕಾಮಾಯನಿ' ಎಂಬುದಾಗಿ

ಆಧುನಿಕ ಹಿಂದಿ ಸಾಹಿತ್ಯದ ಮುಂದುವರೆದ ಕಾಲಘಟ್ಟದಲ್ಲಿ ಪ್ರಮುಖ ಕವಿಗಳಲ್ಲಿ ಮಹಾವೀರ ಪ್ರಸಾದ್ ದ್ವಿವೇದಿ ಮತ್ತು ಪ್ರೇಮ ಇವರುಗಳು ಪ್ರಮುಖರಾಗುತ್ತಾರೆ. ಮಹಾವೀರಪ್ರಸಾದ್ ದ್ವಿವೇದಿಯ ಕಾದಂಬರಿ, ಸಣ್ಣಕತೆ, ನಾಟಕ, ಕವಿತೆ ಈ ಎಲ್ಲ ಪ್ರಕಾರಗಳಲ್ಲಿಯೂ ಕ್ರಿಯಾಶೀಲರಾಗಿದ್ದಾರೆ. ಪ್ರಮುಖ ಕಾದಂಬರಿಕಾರರೆಂದು ಪ್ರಸಿದ್ಧ ಪ್ರೇಮಚಂದರು 'ಪ್ರತಿಜ್ಞಾ', 'ವರದಾನ', 'ಸೇವಾಸದನ', 'ಪ್ರೇಮಾ 'ನಿರ್ಮಲ', 'ರಂಗಭೂಮಿ','ಕಾಯಕಲ್ಪ', 'ಗಬನ್', 'ಗೋದಾನ' 'ಮಂಗಳಸೂತ್ರ' ಈ ಪ್ರಮುಖವಾದ ಹತ್ತು ಕಾದಂಬರಿಗಳನ್ನು ಬರೆ ಈ ಒಂದೊಂದು ಕಾದಂಬರಿಗಳಲ್ಲಿಯೂ ಮನುಷ್ಯ ಜೀವನದ ಗಹ ಹಲವು ಸಮಸ್ಯೆಗಳನ್ನು ಎತ್ತಿಕೊಂಡು ಚರ್ಚೆ ನಡೆಸಿದ್ದಾರೆ. 1906ರಲ್ಲಿ ಬರೆದ ಪ್ರಥಮ ಕಾದಂಬರಿ 'ಪ್ರತಿಜ್ಞಾ'ದಲ್ಲಿ ವಿಧವೆಯ ಸಮಸ್ಯೆಯನ್ನು ಚಿತ್ರೀಕರಿಸಿದ್ದಾರೆ. ಅದರಂತೆ ಎರಡನೆಯ ಕಾದಂಬರಿ ವರದಾನದಲ್ಲಿ ನಿಷ್ಕಲ್ಮಷ ಪ್ರೇಮದ ವಿಷಯವಿದೆ. ಮೂರನೆಯ ಕಾದಂಬರಿ. ಸೇವಾ ವೇಶ್ಯಾಸಮಸ್ಯೆ ಕುರಿತದ್ದಾಗಿದೆ. ನಾಲ್ಕನೆಯದಾದ ಪ್ರೇಮಾಶ್ರಮವು ರೈ ಕುರಿತಾದ ಕಾದಂಬರಿಯಾದರೆ ಐದನೆಯದಾದ ನಿರ್ಮಲ ಕಾದಂ ವರದಕ್ಷಿಣೆ ಸಮಸ್ಯೆಗೆ ಸಂಬಂಧಿಸಿದುದಾಗಿದೆ. ಆರನೆಯ ಕಾ ರಂಗಭೂಮಿಯಲ್ಲಿ ಅಧಿಕಾರಿ ವರ್ಗದ ದೌರ್ಜನ್ಯಗಳನ್ನು ಕುರಿತದ್ದಾಗಿ ಪ್ರೇಮಚಂದರು ತಮ್ಮ ಒಂದೊಂದು ಕೃತಿಗಳಲ್ಲಿಯೂ ಕೂಡ ವಿಶಿಷ್ಟವಾದ ಭಿನ್ನ ಭಿನ್ನವಾದ ವಸ್ತು ವಿಷಯಗಳನ್ನು ತೆಗೆದು ಚರ್ಚಿಸಿರುವುದನ್ನು ಕಾಣಬಹುದಾಗಿದೆ.

ಪ್ರೇಮಚಂದರ ಅನೇಕ ಕಾದಂಬರಿಗಳು ಅನೇಕ ಭಾರತೀಯ ವಿದೇಶಿ ಭಾಷೆಗಳಿಗೂ ಕೂಡ ಅನುವಾದಗೊಂಡು ಜನಪ್ರಿಯತೆ ಪ್ರೇಮಚಂದರು ಕಾದಂಬರಿಗಳ ಜೊತೆಗೆ ಅನೇಕ ಸಣ್ಣಕತೆಗಳನ್ನು ಬರ ಕತೆಗಾರರಾಗಿಯೂ ಕೂಡ ಪ್ರಸಿದ್ಧಿ ಪಡೆದಿದ್ದಾರೆ.

ಪ್ರೇಮಚಂದರ ನಂತರದ ಪ್ರಮುಖ ಲೇಖಕರೆಂದರೆ ಜೈನೇಂದ್ರ ಕುಮಾರ್ ಮತ್ತು ರೇಣು ಇವರುಗಳು ಜೈನೇಂದ್ರಕುಮಾರ್ ಅವರು 'ಸುನೀತ' ಹಾಗೂ 'ತ್ಯಾಗಪತ್ರ' ಎಂಬ ಎರಡು ಪ್ರಮುಖ ಕಾದಂಬರಿಗಳನ್ನು ರಚಿಸಿದ್ದಾರೆ. ಹಾಗೆಯೆ ಇನ್ನೊಬ್ಬ ಕಾದಂಬರಿಕಾರ ರೇಣು ಅವರು ಪ್ರಖ್ಯಾತ ಕಾದಂಬರಿಯಾದ 'ಮೈಲಾ ಆಂಚಲ್' ಎಂಬುದನ್ನು ಹಿಂದಿ ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಛಾಯಾವಾದದ ನಂತರ ಹಿಂದಿಯಲ್ಲಿ 'ಪ್ರಯೋಗವಾದ' ಎಂಬ ಪ್ರಕಾರವು ಮೈದಾಳಿತು. ಈ ಪ್ರಕಾರದಲ್ಲಿ ಸಾಹಿತ್ಯರಚನೆ ಮಾಡಿದ ಪ್ರಮುಖ ಕವಿಗಳೆಂದರೆ ಅಜ್ಞೇಯ, ಧರ್ಮವೀರ ಭಾರತಿ, ಲಕ್ಷ್ಮೀಕಾಂತ್‌ವರ್ಮ, ಗಿರಿಜಾ ಕುಮಾರ್‌ಮಾಥುರ್ ಹಾಗೂ ಮುಕ್ತಿಭೋಧ್ ಈ ಮೊದಲಾದವರಾಗಿದ್ದಾರೆ.



# ಅಸ್ಸಾಮಿ

ಅಸ್ಸಾಮಿಭಾಷೆಯು ಭಾರತದ ಈಶಾನ್ಯ ಗುಡ್ಡಗಾಡು ರಾಜ್ಯವಾ
ಅಸ್ಸಾಂನ ಆಡಳಿತ ಭಾಷೆ. ಈ ಭಾಷೆಯು ಮಾಗಧಿ ಅಪಭ್ರಂಶದ
ಪೂರ್ವಾತ್ತರದಿಂದ ವಿಕಾಸಗೊಂಡು ಬೆಳೆದಿದೆ. ಇದನ್ನು ಅಸ್ಸಾಂ ರಾಜ್ಯದಲ್ಲಿ
ಸುಮಾರು ಎರಡುಕೋಟಿ ಜನರು ಮಾತನಾಡುತ್ತಾರೆ. ಈ ಭಾಷೆಗೆ ಕ್ರಿ. ಶ
ಏಳನೆ ಶತಮಾನದಿಂದ ಈಚಿನ ಇತಿಹಾಸವಿದೆ.

ಅಸ್ಸಾಮಿ ಭಾಷೆಯಲ್ಲಿ ಕ್ರಿ. ಶ. 13ನೇ ಶತಮಾನದಿಂದ ಇತ್ತೀಚೆ
ಸಾಹಿತ್ಯರಚನೆ ಆರಂಭಗೊಂಡು ಬೆಳೆದಿದೆ. ಅಸ್ಸಾಮಿಭಾಷೆಯನ್ನು ಬರೆಯಲ
ಬಂಗಾಳಿಲಿಪಿಯನ್ನು ಹೋಲುವ ಒಂದು ಲಿಪಿಯನ್ನು ಬಳಸುತ್ತಾರೆ. ಅಸ್ಸಾಮಿ
ಭಾಷೆಯಲ್ಲಿ ಮೊದಲ ಕೃತಿಗಳೆಂದರೆ ಕ್ರಿ. ಶ. ಹದಿಮೂರನೆ ಶತಮಾನ
ಅಂತ್ಯಭಾಗದಲ್ಲಿ ರಚನೆಯಾದವುಗಳೆಂದು ಹೇಳಲಾದ 'ದ್ರೋಣಪರ್ವ' ಮತ್ತು
'ರಾಮಾಯಣ' ಎಂಬವುಗಳು. ದ್ರೋಣಪರ್ವವನ್ನು ರುದ್ರಕಾಂಡಲಿ ಎಂಬವರ
ರಚಿಸಿದರೆ. ರಾಮಾಯಣವನ್ನು ಮಾಧವ ಕಾಂಡಲಿಯುವರು ರಚಿಸಿದ್ದಾರೆ. ಈ
ಎರಡೂ ಕೃತಿಗಳೂ ಕೂಡ ಮೂಲ ಮಹಾಭಾರತ ಮತ್ತು ರಾಮಾಯಣಗ
ಅನುವಾದಿತ ಕೃತಿಗಳಾಗಿವೆ. ಅನುವಾದಿತ ಕೃತಿಗಳಾದರೂ ಕೂಡ ತನ್ನದೆ ಅ
ಸ್ವಂತಿಕೆಯಿಂದ ರೂಪಗೊಂಡು ಅಸ್ಸಾಮಿ ಸಾಹಿತ್ಯಕ್ಕೆ ಸುಭದ್ರ ತಳಪಾಯವನ
ಹಾಕಿವೆ. ಈ ನಂತರದ ಕಾಲದಲ್ಲಿ ಶಂಕರದೇವ ಎಂಬುವನು ಅನೇಕ ಕವಿತೆಗಳ
ಮತ್ತು ನಾಟಕಗಳನ್ನು ರಚಿಸಿ ಅಸ್ಸಾಮಿ ಸಾಹಿತ್ಯವನ್ನು ಶ್ರೀಮಂತಗೊಳಿಸಿದನು

ಎರಡನೆಯ ಹಂತದ ಅಸ್ಸಾಮಿ ಸಾಹಿತ್ಯವು ತುಂಬಾ ವೈವಿಧ್ಯಮಯವಾ
ಬೆಳೆದಿದೆ. ಅನೇಕ ಮಹಾಕಾವ್ಯಗಳು, ಪುರಾಣಗಳು, ಭಕ್ತಿರಚನೆಗಳು
ಅನುವಾದಿತ ಕೃತಿಗಳು. ಈ ಎಲ್ಲವುಗಳೂ ಕೂಡ ರಚನೆಯಾಗಿವೆ. ಈ ಹಂತದ
ಪ್ರಖ್ಯಾತ ಲೇಖಕರೆಂದರೆ ಭಟ್ಟದೇವ್, ಧಾಮೋಧರವೇಲ್ ಮತ್ತು
ಪುರುಷೋತ್ತಮ ಠಾಕೂರ್ ಇವರುಗಳು ಮುಖ್ಯರಾಗುತ್ತಾರೆ. ಭಟ್ಟದೇವ
ಅವರು ಅನೇಕ ಅಮೂಲ್ಯ ಕೃತಿಗಳನ್ನು ರಚಿಸಿದರೆ ದಾಮೋದರದೇವ್ ಅವರ
ಪ್ರಮುಖ ಜೀವನಚರಿತ್ರೆಗಳನ್ನು ರಚಿಸಿದ್ದಾರೆ. ಅಂತೆಯೆ ಪುರುಷೋತ್ತಮ

ಠಾಕೂರರು ಭಾಷಾಶಾಸ್ತ್ರ ಮತ್ತು ವ್ಯಾಕರಣ ಕೃತಿಗಳನ್ನು ರಚಿಸಿದ್ದಾರೆ. ಈ ನಂತರದ ಕಾಲಾವಧಿಯಲ್ಲಿ ಅಸ್ಸಾಮಿಯಲ್ಲಿ ಬುರುಂಜಿ ಎಂಬ ಸಾಹಿತ್ಯ ಪಂಥ ಬೆಳಕು ಕಂಡಿತು. ಈ ಬುರುಂಜಿಯೇ ಆಧುನಿಕ ಅಸ್ಸಾಮಿ ಸಾಹಿತ್ಯಕ್ಕೆ ಮೈಲಿಗಲ್ಲಾಯಿತು. ಹದಿನೆಂಟನೆ ಶತಮಾನದ ಅಂತ್ಯಭಾಗದ ವೇಳೆಗೆ ಅಸ್ಸಾಮಿಯಲ್ಲಿ ಆಧುನಿಕ ಸಾಹಿತ್ಯದ ಉದಯವಾಯಿತು. ಇತರೆಲ್ಲ ಭಾಷೆಗಳಂತೆ ಅಸ್ಸಾಮಿ ಆಧುನಿಕ ಸಾಹಿತ್ಯಕ್ಕೂ ಕೂಡ ಪಾಶ್ಚಾತ್ಯರೆ ಪ್ರೇರಕರಾಗಿದ್ದಾರೆ. ಬಹುಪಾಲು ಪದ್ಯರೂಪದಲ್ಲಿಯೆ ಮೊದಲಿನಿಂದಲೂ ಬೆಳೆದುಕೊಂಡು ಬಂದ ಅಸ್ಸಾಮಿ ಸಾಹಿತ್ಯ ಗದ್ಯ ರೂಪ ಪಡೆದದ್ದು ಆಧುನಿಕ ಕಾಲದಲ್ಲಿ ಎಂದೇ ಹೇಳಬಹುದು.

ಹತ್ತೊಂಬತ್ತನೆಯ ಶತಮಾನದ ಪೂರ್ವದ ಕಾಲದಲ್ಲಿ ಅಸ್ಸಾಮಿ ಸಾಹಿತ್ಯ ಬಹಳ ಹಿನ್ನಡೆ ಅನುಭವಿಸಿತು. ಈ ಅವಧಿಯಲ್ಲಿ ಅಸ್ಸಾಂನಲ್ಲಿ ಬಂಗಾಳಿಯೇ ಗಾಳಿ ಬೀಸಿತು. ಸುಮಾರು ಕಾಲ ಈ ಬಂಗಾಳಿಯೇ ಅಸ್ಸಾಂನ ಆಡಳಿತ ಭಾಷೆಯೂ ಕೂಡ ಆಯಿತು. ಆದರೆ ಸ್ವಲ್ಪಕಾಲದಲ್ಲಿಯೆ ಚೇತರಿಸಿಕೊಂಡ ಅಸ್ಸಾಮಿ ಸಾಹಿತ್ಯ ವೇಗವಾಗಿ ಬೆಳೆಯತೊಡಗಿತು. ಈ ಹಂತದಲ್ಲಿ ಬಹುತೇಕ ಯೂರೋಪಿಯನ್ ವಿದ್ವಾಂಸರು ಅಸ್ಸಾಮಿ ಭಾಷೆ ಚರಿತ್ರೆ. ಇಂಗ್ಲೀಷ್-ಅಸ್ಸಾಮಿ ನಿಘಂಟುಗಳು ಮತ್ತು ಅಸ್ಸಾಮಿ ಬೈಬಲ್‌ಗಳನ್ನು ಬರೆದರು. ಇವರುಗಳ ಜೊತೆಗೆ ಅಸ್ಸಾಮಿಯರಾದ ಚಂದ್ರಕುಮಾರ ಅಗರವಾಲ, ಹೇಮಚಂದ್ರಗೋಪಾಲ ಸ್ವಾಮಿ, ಲಕ್ಷ್ಮೀಕಾಂತ ಬೆಜಬರುವ ಮೊದಲಾದವರು ಅಸ್ಸಾಮಿ ಭಾಷೆ ಬೆಳೆದು ಸರಿಯಾದ ನೆಲೆ ಪಡೆಯಲು ಅಪಾರವಾಗಿ ಶ್ರಮಿಸಿದರು. ಇವರುಗಳು ಅನೇಕ ಕೃತಿಗಳನ್ನು ಬರೆಯುವುದರ ಜೊತೆಗೆ ಅಸ್ಸಾಮಿ ಭಾಷೆಯಲ್ಲಿ ವೃತ್ತ ಪತ್ರಿಕೆಗಳನ್ನು ಹೊರಡಿಸಿ ಜನಜಾಗೃತಿಯನ್ನು ಮೂಡಿಸಿ ಜನತೆಯಲ್ಲಿ ನಾಡು-ನುಡಿಯ ಅಭಿಮಾನವನ್ನು ತುಂಬಿದರು.

ಈ ನಂತರದ ಕಾಲದಲ್ಲಿ ಅಂದರೆ ಹತ್ತೊಂಬತ್ತನೆ ಶತಮಾನದಲ್ಲಿ ಅಸ್ಸಾಮಿ ಕಾದಂಬರಿಗಳು ಅವ್ಯಾಹತವಾಗಿ ರಚನೆಯಾದವು. ಪ್ರಮುಖ ಕಾದಂಬರಿಕಾರರೆನಿಸಿರುವ ಪದ್ಮನಾಥ್ ಗೋಹೇನ್‌ಬರುವಾ, ರಜನಿಕಾಂತ್ ಬರ್ದೋಲಾಯ್, ದೈಬಾಚಂದ್ರತಾಲೂಕ್‌ದಾರ್, ದಂಡಿನಾಥಕಲಿಟ ಹಾಗೂ ಬೀನಾಬರುವಾ ಇವರುಗಳೆ ಮೊದಲಾದವರು ಅನೇಕ ಸಾಮಾಜಿಕ ಮತ್ತು

ಐತಿಹಾಸಿಕ ಕಾದಂಬರಿಗಳನ್ನು ಬರೆದು ಅಸ್ಸಾಮಿ ಸಾಹಿತ್ಯವ
ಶ್ರೀಮಂತಗೊಳಿಸಿದರು.

ಇಪ್ಪತ್ತನೆಯ ಶತಮಾನದಲ್ಲಿಯೂ ಕೂಡ ಅಪಾರ ಸಂಖ್ಯೆ
ಕಾದಂಬರಿಗಳು ಅಸ್ಸಾಮಿನಲ್ಲಿ ರಚನೆಯಾದವು. ಈ ಅವಧಿಯ ಪ್ರಮು
ಕಾದಂಬರಿಕಾರರಾದ ಬೀರೇಂದ್ರಕುಮಾರಭಟ್ಟಾಚಾರ್ಯ. ಸೈಯದ್ ಅಬ್ಬು
ಮಲ್ಲಿಕ್, ಹೋಂಗೇಶ್‌ದಾರ್ ಇವರುಗಳು ಮುಖ್ಯರಾಗುತ್ತಾರೆ. ಇವರುಗಳ
ಬೀರೇಂದ್ರಕುಮಾರಭಟ್ಟಾಚಾರ್ಯ ಅವರು ತಮ್ಮ ಸರ್ವಶ್ರೇಷ್ಠ ಕಾದಂ
ಯಾದ 'ಇಯಾರಿಂಗಮ್' ಕೃತಿಗೆ ಜ್ಞಾನಪೀಠ ಪ್ರಶಸ್ತಿಯನ್ನು ಪಡೆದಿದ್ದಾರೆ

ಇವರುಗಳ ನಂತರ ಅನೇಕ ಉದಯೋನ್ಮುಖ ಕವಿಗಳು ಅಸ್ಸಾಮಿಯ
ಕಾದಂಬರಿ, ನಾಟಕ, ಸಣ್ಣಕತೆ, ಕವಿತೆಗಳು, ಜೀವನಚರಿತ್ರೆ ಈ ಮೊದಲಾ
ಗಳನ್ನು ಬರೆದು ಅಪಾರ ಹೆಸರು ಗಳಿಸಿದ್ದಾರೆ.



# ಪಂಜಾಬಿ

ಪಂಜಾಬಿಯು ಪಂಜಾಬ್ ರಾಜ್ಯದ ಜನಭಾಷೆ. ಭಾರತದ ಪಶ್ಚಿಮ ಭಾಗದ ರಾಜ್ಯವಾದ ಪಂಜಾಬ್ ರಾಜ್ಯದಲ್ಲಿನ ಸುಮಾರು ಒಂದು ಕೋಟಿಗೂ ಅಧಿಕ ಜನ ಈ ಭಾಷೆಯನ್ನು ಮಾತನಾಡುತ್ತಾರೆ. ಜೊತೆಗೆ ಈ ಭಾಷೆಯನ್ನು ರಾಜಸ್ಥಾನ, ಉತ್ತರಪ್ರದೇಶ, ಗುಜರಾತ್, ಮಧ್ಯಪ್ರದೇಶ ರಾಜ್ಯಗಳ ಕೆಲವು ಜನರೂ ಕೂಡ ಮಾತನಾಡುತ್ತಾರೆ. ಈ ಭಾಷೆಯನ್ನು ಬರೆಯಲು ಲಂಡ ಅಥವ ಗುರುಮುಖಿ ಲಿಪಿಯನ್ನು ಬಳಸುತ್ತಾರೆ.

ಪಂಜಾಬಿ ಭಾಷೆಯಲ್ಲಿ ಕ್ರಿ. ಶ. ಹನ್ನೊಂದನೆಯ ಶತಮಾನದಿಂದ ಈಚೆಗೆ ಸಾಹಿತ್ಯ ರಚನೆಯು ಆರಂಭವಾಗಿದೆ. ಆರಂಭಕಾಲದ ಸಾಹಿತ್ಯವು ವೈದಿಕ ಮತ್ತು ಅರಬ್ಬಿ ಸಾಹಿತ್ಯದ ಪ್ರಭಾವದಿಂದ ಬೆಳೆದು ವಿಕಾಸಗೊಂಡಿದೆ. ಈ ಆರಂಭದ ಸಾಹಿತ್ಯವು ಬಹುತೇಕ ಧಾರ್ಮಿಕ ವಿಚಾರಗಳನ್ನು ಕುರಿತದ್ದೇ ಆಗಿದೆ. ಕ್ರಿ. ಶ. 13ನೇ ಶತಮಾನದಲ್ಲಿ ಬಾಬಾ ಫರೀದ ಎಂಬುವರು ಪಂಜಾಬಿಯಲ್ಲಿ ಅನೇಕ ಭಕ್ತಿರಚನೆಗಳನ್ನು ರಚಿಸಿದರು. ಮುಸ್ಲಿಂ ಕವಿಯಾದ ಈತನು ರಚಿಸಿರುವ ಕವಿತೆಗಳು ಭಾವಪೂರ್ಣವೂ, ಸುಮಧುರವೂ ಆಗಿರುವುದನ್ನು ಕಾಣಬಹುದಾಗಿದೆ.

ಪಂಜಾಬಿ ಸಾಹಿತ್ಯದ ಪ್ರಮುಖ ಘಟ್ಟ ಎಂದರೆ ಸಿಖ್ ಧರ್ಮ ಸಂಸ್ಥಾಪಕರಾದ ಗುರುನಾನಕರ ಕಾಲ. ಇವರ ಕಾಲ ಇಡೀ ಪಂಜಾಬಿ ಸಾಹಿತ್ಯ ಚರಿತ್ರೆಯಲ್ಲಿಯೇ ಒಂದು ಪರ್ವಕಾಲ. ಈ ಕಾಲದಲ್ಲಿ ಬಹುತೇಕ ಧಾರ್ಮಿಕ ಸಾಹಿತ್ಯವೇ ರೂಪಗೊಂಡಿತಾದರೂ ಅದು ಸಾಹಿತ್ಯಕವಾಗಿಯೂ ಮೌಲ್ಯಯುತವಾಗಿದೆ. ಸಿಖ್‌ಧರ್ಮದ ಪವಿತ್ರಗ್ರಂಥ 'ಗ್ರಂಥಸಾಹೇಬ' ರಚನೆಯಾದುದು ಕೂಡ ಈ ಕಾಲದಲ್ಲಿಯೇ. ಈ ಒಂದು ಮಹತ್ಕೃತಿಯಲ್ಲಿ ಹಲವು ಸೊಗಸಾದ ಗೀತೆಗಳು ಅಡಕವಾಗಿವೆ. ಹಾಗೆಯೆ ಸೂಫಿಸಂನಿಂದ ಪ್ರಭಾವಿತಗೊಂಡ ಕಾವ್ಯಪ್ರಕಾರವು ಕೂಡ ಪಂಜಾಬಿಯಲ್ಲಿ ಬೆಳೆಯಿತು. ಬುಲ್ಲೆಷಾ ಹಾಗೂ ವಾರಿಸ್ ಷಾ ಈ ಮೊದಲಾದವರು ಈ ದಿಕ್ಕಿನಲ್ಲಿ ಅಪಾರ ಕೃಷಿ ಮಾಡಿದ್ದಾರೆ.

ಹತ್ತೊಂಬತ್ತನೆ ಶತಮಾನದ ಮಧ್ಯಭಾಗದಿಂದ ಆಧುನಿಕ ಪಂಜಾ ಸಾಹಿತ್ಯವು ಆರಂಭವಾಗುತ್ತದೆ. ಪ್ರಾರಂಭದ ಹಂತದಲ್ಲಿ ಕ್ರೈಸ್ತ ಮಿಷನರಿಗ ತಮ್ಮ ಕೊಡುಗೆಯನ್ನು ಕೊಟ್ಟಿದ್ದಾರೆ. 1952ರಲ್ಲಿ ಮೂಲ ಬೈಬಲ್ ಪಂಜಾಬಿ ರೂಪಾಂತರವು ಬಂದಿತು. ಹಾಗೆಯೆ 1854ರಲ್ಲಿ ಇಂಗ್ಲೀಷ ಪಂಜಾಬಿ ನಿಘಂಟನ್ನು ಲೂಧಿಯಾನದ ಕ್ರೈಸ್ತ ಮಿಷನ್ ಪ್ರಕಟಿಸಿತು.

ಮುಂದಿನ ಕಾಲಘಟ್ಟದಲ್ಲಿ ಪ್ರಮುಖ ಬರಹಗಾರರಾದ ಕೃಪಾಸಿಂಗ ಪೂರಣ್‌ಸಿಂಗ್ ಹಾಗೂ ವೀರಸಿಂಗ್ ಇವರುಗಳು ಅನೇಕ ಅತ್ಯುತ್ತ ಕೃತಿಗಳನ್ನು ರಚಿಸಿ ಪಂಜಾಬಿ ಸಾಹಿತ್ಯವನ್ನು ಶ್ರೀಮಂತಗೊಳಿಸಿದರ ಇವರುಗಳಲ್ಲಿ ವೀರಸಿಂಗ್ ಅವರು ಆಧುನಿಕ ಪಂಜಾಬಿ ಸಾಹಿತ್ಯದ ಮಹಾ ಲೇಖಕರು. ಇವರು ಅನೇಕ ಸುಮಧುರ ಭಾವಗೀತೆಗಳನ್ನು ಹಾಗ ಮತಧರ್ಮಕ್ಕೆ ಸಂಬಂಧಿಸಿದಂತಹ ಕೃತಿಗಳನ್ನು ರಚಿಸಿದ್ದಾರೆ. ಆದರೂ ಇವ ಎಲ್ಲ ಬರಹಗಳೂ ಪಾಶ್ಚಿಮಾತ್ಯ ಪ್ರೇರಣೆ ಪಡೆದಿರುವುದನ್ನು ನಿಸ್ಸಂಶಯವಾ ಗುರುತಿಸಬಹುದಾಗಿದೆ.

ಪಂಜಾಬಿ ಪ್ರಗತಿಪರ ಮತ್ತು ರಾಷ್ಟ್ರೀಯವಾದಿ ಸಾಹಿತ್ಯ ರೂಪಗೊಂಡದ್ದು ಹತ್ತೊಂಬತ್ತನೆಯ ಶತಮಾನದ ಅಂತ್ಯ ಮತ್ತು ಇಪ್ಪತ್ತನೆ ಶತಮಾನದ ಆರಂಭ ಕಾಲದಲ್ಲಿ. ಈ ಅವಧಿಯಲ್ಲಿನ ಪ್ರಮುಖ ಕವಿಗ ಹಾಗೂ ಬರಹಗಾರರಾದ ಹೀರಾಸಿಂಗ್, ಗುರುಮುಖ್‌ಸಿಂಗ್, ಮುಸಾಫಿ ಈ ಮೊದಲಾದವರು ರಾಷ್ಟ್ರೀಯವಾದಿ ಸಾಹಿತ್ಯವನ್ನೂ, ಅಮೃತಾಪ್ರೀತಮ ಮೋಹನ್‌ಸಿಂಗ್ ಹಾಗೂ ಹರಭಜನ್‌ಸಿಂಗ್ ಇವರುಗಳು ಪ್ರಗತಿಪ ಸಾಹಿತ್ಯವನ್ನು ರಚಿಸಿದರು. ಇವರುಗಳಲ್ಲಿ ಅಮೃತಾಪ್ರೀತಂ ಅವರು ಸಾಹಿತ್ಯ ಅತ್ಯುನ್ನತ ಪ್ರಶಸ್ತಿಯಾದ ಜ್ಞಾನಪೀಠವನ್ನು ಪಡೆದಿದ್ದಾರೆ.

ಈ ಮುಂದಿನ ಸಾಹಿತಿಗಳಲ್ಲಿ ನಾನಕ್‌ಸಿಂಗ್, ಎಸ್. ಎಸ್. ನರೂ ಭಾಯ್‌ವೀರಸಿಂಗ್, ಕೆ. ಎಸ್. ದುಗ್ಗಲ್ ಇವರುಗಳು ಪ್ರಮುಖರಾಗಿದ್ದಾ ಹಾಗೆಯೆ ಗುರುದಯಾಳ್‌ಸಿಂಗ್ ಖೋಸ್ಲಾ, ಸಂತಸಿಂಗ್ ಸೇಖೊ ಗುರುಭಕ್ಷ್‌ಸಿಂಗ್ ಈ ಮೊದಲಾದವರು ಅತ್ಯುತ್ತಮ ನಾಟಕಕಾರರಾಗಿದ್ದಾ ಪ್ರಭ್ಜ್ಯೋತ್‌ಕೌರ್ ಅವರು ಪಂಜಾಬಿಯ ರಾಷ್ಟ್ರಕವಿಯಾಗಿದ್ದಾರೆ.



# ಸಂಸ್ಕೃತ

ಸಂಸ್ಕೃತವು ಇಂದು ಜನಬಳಕೆಯಲ್ಲಿ ಇಲ್ಲದ, ಆದರೆ ಸಾಹಿತ್ಯಕವಾಗಿ ಚಾಲ್ತಿಯಲ್ಲಿರುವ ಒಂದು ಭಾಷೆ. ಇದನ್ನು ಕೇವಲ ಸಾಹಿತ್ಯಕ ಭಾಷೆ ಎಂದು ಕರೆಯುತ್ತಾರೆ. ಈ ಭಾಷೆಯು ಆರ್ಯನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆ. ಭಾರತದಲ್ಲಿನ ಅತ್ಯಂತ ಪ್ರಾಚೀನ ಭಾಷೆ ಕೂಡ ಇದೇ ಆಗಿದೆ. ಈ ಸಂಸ್ಕೃತ ಭಾಷೆಯಿಂದಲೆ ಬಹುಪಾಲು ಭಾರತೀಯ ಭಾಷೆಗಳೆಲ್ಲವೂ ಜನಿಸಿರುವವು ಎಂಬ ಒಂದು ಪ್ರಬಲವಾದ ವಾದವು ಕೂಡ ಇದೆ. ಎಲ್ಲ ಭಾರತೀಯ ಭಾಷೆಗಳು ಸಂಸ್ಕೃತದಿಂದಲೆ ಜನಿಸಿರುವವು ಎಂಬುದನ್ನು ಒಪ್ಪದಿದ್ದರೂ ಬಹುತೇಕ ಆರ್ಯನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆಗಳು ಹಾಗೂ ಉಪಭಾಷೆಗಳು ಇದರಿಂದ ಜನಿಸಿ ಕವಲೊಡೆದಿವೆ ಎಂಬ ಅಂಶವನ್ನಾದರೂ ಒಪ್ಪಬೇಕಾಗಿದೆ.

ಈ ಸಂಸ್ಕೃತ ಭಾಷೆಯ ಪ್ರಾಚೀನತೆಯನ್ನು ಕ್ರಿ. ಪೂ. 2500 ವರ್ಷಗಳ ಹಿಂದಕ್ಕೆ ಕೊಂಡೊಯ್ಯುತ್ತಾರೆ. ಭಾರತದ ಎಲ್ಲ ಪ್ರಮುಖ ಭಾಷೆಗಳ ಮೇಲೆಯೂ ಈ ಸಂಸ್ಕೃತ ಭಾಷೆಯ ಪ್ರಭಾವ ಒಂದಲ್ಲ ಒಂದು ರೀತಿಯಿಂದ ಆಗಿದೆ. ಭಾರತದ ಯಾವುದೇ ಪ್ರಮುಖ ಭಾಷೆಯನ್ನು ನಾವು ಅವಲೋಕಿಸಿ ನೋಡಿದರೂ ಅದರಲ್ಲಿ ಯಥೇಚ್ಛವಾಗಿ ಸಂಸ್ಕೃತದ ಪದಗಳು ದೊರೆಯುತ್ತವೆ. ಇದಕ್ಕೆ ಪ್ರಬಲವಾದ ಕಾರಣವೂ ಕೂಡ ಇದೆ. ಭಾರತೀಯ ಭಾಷೆಗಳಲ್ಲಿಯೆ ಮೊದಲು ಸಾಹಿತ್ಯ ರಚನೆ ಆರಂಭಗೊಂಡದ್ದು ಸಂಸ್ಕೃತದಲ್ಲಿ, ಹಾಗಾಗಿ ಒಂದು ಕಾಲದಲ್ಲಿ ಸಾಹಿತ್ಯವೆಂದರೆ ಸಂಸ್ಕೃತ ಎಂದೇ ಹೇಳುವಂತಿತ್ತು. ಪ್ರಾಚೀನ ಭಾರತದ ರಾಜ-ಮಹಾರಾಜರುಗಳೆಲ್ಲ ಈ ಸಂಸ್ಕೃತಕ್ಕೇ ರಾಜಾಶ್ರಯವನ್ನು ಕೊಟ್ಟರು. ಆ ಕಾರಣದಿಂದ ಇದು ಇಡೀ ಭಾರತದಾದ್ಯಂತ ತುಂಬ ವ್ಯಾಪಕವಾಗಿ ಹರಡಿಕೊಂಡಿತು. ಹಾಗೆ ಹರಡಿಕೊಂಡ ಇದು ಆಯಾ ಪ್ರಾಂತ್ಯಗಳ ಜನಭಾಷೆಗಳಲ್ಲಿ ಮಿಳಿತವಾಗತೊಡಗಿತು. ಕಾಲಕ್ರಮೇಣ ಆ ಜನಭಾಷೆಗಳ ಹಾಸು-ಹೊಕ್ಕಾಯಿತು. ಹಾಗಾಗಿಯೆ ಇಂದು ಎಲ್ಲ ಭಾರತೀಯ ಭಾಷೆಗಳಲ್ಲಿ ಈ ಸಂಸ್ಕೃತ ಮಿಳಿತವಾಗಿದೆ. ಮತ್ತೊಂದು ಅಂಶ ಎಂದರೆ ಪ್ರಾಚೀನ ಭಾರತದಲ್ಲಿ ಶಿಕ್ಷಣ, ವಿದ್ಯೆ ಎಂದರೆ ಅದು ಸಂಸ್ಕೃತವನ್ನು ಕಲಿಯುವುದೇ ಆಗಿತ್ತು. ಈ

ಅಂಶ ಕೂಡ ಎಲ್ಲ ಭಾಷೆಗಳ ಮೇಲೆ ಪ್ರಭಾವ ಬೀರಲು ಪ್ರಮುಖವಾದ ಕಾರಣವಾಗಿದೆ.

ಸಂಸ್ಕೃತವು ಪ್ರಮುಖವಾಗಿ ಎರಡು ವಿಧಗಳಾಗಿ ಎರಡು ಹಂತಗಳಲ್ಲಿ ಬೆಳವಣಿಗೆಯನ್ನು ಹೊಂದಿದೆ. ಆ ಎರಡು ವಿಧಗಳೆಂದರೆ ವೈದಿಕ ಹಾಗೂ ಲೌಕಿಕ ಸಂಸ್ಕೃತಗಳು.

ವೈದಿಕ ಸಂಸ್ಕೃತವು ಅತ್ಯಂತ ಪ್ರಾಚೀನವಾದುದು. ಇದನ್ನು ವೇದಗಳ ಸಂಸ್ಕೃತ ಎಂದು ಕೂಡ ಕರೆಯುತ್ತಾರೆ. ಈ ವೈದಿಕ ಸಂಸ್ಕೃತದಿಂದಲೇ ಅನೇಕ ಆರ್ಯ ಭಾಷೆಗಳು ಹುಟ್ಟಿ ಬೆಳೆದುಬಂದಿವೆ. ಆರಂಭಕಾಲದ ಭಾರತೀಯ ಬಹುಪಾಲು ಸಾಹಿತ್ಯವೆಲ್ಲವೂ ಈ ವೈದಿಕ ಸಂಸ್ಕೃತದಿಂದಲೆ ರಚನೆಯಾಗಿವೆ. ನಮ್ಮ ಭಾರತೀಯ ವೇದಗಳು, ಉಪನಿಷತ್ತುಗಳು, ಸ್ಮೃತಿಗಳು ಈ ಎಲ್ಲವುಗಳೂ ಕೂಡ ಈ ವೈದಿಕ ಸಂಸ್ಕೃತ ಭಾಷೆಯಿಂದಲೆ ರಚಿತವಾಗಿವೆ.

ವೈದಿಕ ಸಂಸ್ಕೃತದಿಂದ ಲೌಕಿಕ ಸಂಸ್ಕೃತವು ಜನಿಸಿದೆ. ಇದನ್ನು ಲೌಕಿಕ ಸಂಸ್ಕೃತ, ಸಾಹಿತ್ಯಕ ಸಂಸ್ಕೃತ ಹಾಗೂ ಪಾಣಿನ್ಯೋತ್ತರ ಸಂಸ್ಕೃತ ಎಂದು ಮೊದಲಾಗಿ ಕರೆಯುತ್ತಾರೆ. ಅತಿ ಪ್ರಾಚೀನ ಕಾಲದಿಂದ ಹಿಡಿದು ಪಾಣಿನಿ ಮಹರ್ಷಿಯವರೆಗಿನದು ವೈದಿಕ ಸಂಸ್ಕೃತವಾದರೆ ಪಾಣಿನಿಯ ನಂತರದ್ದು ಲೌಕಿಕ ಸಂಸ್ಕೃತವಾಗುತ್ತದೆ. ವೈದಿಕ ಸಂಸ್ಕೃತಕ್ಕೂ, ಲೌಕಿಕ ಸಂಸ್ಕೃತಕ್ಕೂ ಅನೇಕ ವ್ಯತ್ಯಾಸಗಳಿವೆ. ವೈದಿಕ ಸಂಸ್ಕೃತ ಸಾಹಿತ್ಯವು ಧಾರ್ಮಿಕ ವಿಷಯ ಪ್ರಧಾನ ಸಾಹಿತ್ಯವಾಗಿದೆ. ಆದರೆ ಲೌಕಿಕ ಸಂಸ್ಕೃತ ಸಾಹಿತ್ಯವು ಐಹಿಕ, ಲೌಕಿಕ ವಿಷಯ ಪ್ರಧಾನವಾದುದಾಗಿದೆ.

ವೈದಿಕ ಸಂಸ್ಕೃತದಲ್ಲಿ ದಕ್ಷಿಣೀ, ಉತ್ತರಿ, ಮಧ್ಯದೇಶಿ ಹಾಗೂ ಪೂರ್ವೀ ಎಂಬ ನಾಲ್ಕು ಬೇಧಗಳುಂಟಾಗಿ ಅವು ಇಡೀ ಭಾರತದೇಶದ ಬೇರೆ-ಬೇರೆ ಭಾಗಗಳಲ್ಲಿ ಬಳಕೆಯಲ್ಲಿದ್ದವೆಂದು, ಆ ನಾಲ್ಕು ಭೇದಗಳಲ್ಲಿ ಉತ್ತರೀರೂಪವು ಬಹುಮುಖ್ಯವಾದುದಾಗಿದ್ದು ಅದರಿಂದಲೆ ಲೌಕಿಕ ಸಂಸ್ಕೃತವು ಜನಿಸಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಈ ಲೌಕಿಕ ಸಂಸ್ಕೃತವು ಕ್ರಿ. ಪೂ. ಐದು, ಆರನೆ ಶತಮಾನದ ವೇಳೆಗೆ ಉತ್ತರ ಭಾರತದಾದ್ಯಂತ ಪ್ರಚಲಿತವಿದ್ದಿತೆಂಬುದಕ್ಕೆ ಆಧಾರಗಳು ದೊರೆಯುತ್ತವೆ. ಮುಂದೆ ಈ ಒಂದು ಭಾಷೆಯಲ್ಲಿಯೆ ಅಪಾರವಾದ ಸಾಹಿತ್ಯ ಸಂಪತ್ತು ರಚನೆಯಾಗಿರುವುದನ್ನು ನಾವು ಕಾಣಬಹುದಾಗಿದೆ.

ಸಂಸ್ಕೃತ ಭಾಷೆಯ ಬೆಳವಣಿಗೆಯನ್ನು ನಾವು ಅವಲೋಕಿಸುತ್ತಾ ಹೊರಟರೆ ಪ್ರಾಕೃತ ಭಾಷೆಯನ್ನು ನಾವು ನೋಡಲೇಬೇಕಾಗಿದೆ. ಸಂಸ್ಕೃತ ಮತ್ತು ಪಾಳಿ ಭಾಷೆಗಳು ಪ್ರಾಚೀನ ಭಾರತದ ಎರಡು ಪ್ರಮುಖ ಭಾಷೆಗಳಾಗಿ ಒಂದರ ಬೆಳವಣಿಗೆಗೆ ಒಂದು ಸಹಕಾರಿಯಾಗಿವೆ.

ಸಂಸ್ಕೃತ ಭಾಷೆಯ ಸಾಹಿತ್ಯವು ಕ್ರಿಸ್ತಪೂರ್ವದ ಆರಂಭದಿಂದಲೆ ರಚನೆಯಾಗಿದೆ. ಕ್ರಿ. ಪೂ. ಮೂರು ಮತ್ತು ನಾಲ್ಕನೆಯ ಶತಮಾನದಲ್ಲಿ ವೇದಗಳು ರಚನೆಯಾಗಿವೆ. ಈ ವೇದಗಳು ವಿಶ್ವದಲ್ಲಿಯೆ ಅತ್ಯಂತ ಪ್ರಾಚೀನ ಸಾಹಿತ್ಯಗಳೆನಿಸಿವೆ. ಈ ವೇದಗಳು ಅಂದಿನ ಭಾರತೀಯರ ಸಾಮಾಜಿಕ, ಧಾರ್ಮಿಕ, ಆರ್ಥಿಕ ಜೀವನ ಹಾಗೂ ಸಂಸ್ಕೃತಿಯನ್ನು ತಿಳಿಯಲು ತುಂಬಾ ಸಹಕಾರಿಯಾಗಿವೆ.

**ಈ ವೇದಗಳು ನಾಲ್ಕು :** ಅವುಗಳೆಂದರೆ, ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ. ಇವುಗಳಲ್ಲಿ ಋಗ್ವೇದವೆ ಅತ್ಯಂತ ಪ್ರಾಚೀನವಾದುದು ಮತ್ತು ಇತರ ವೇದಗಳಿಗಿಂತ ದೀರ್ಘವಾದುದು. ಇದರಲ್ಲಿ ಶ್ಲೋಕಗಳಿವೆ. ಸಂಪೂರ್ಣ ಕೃತಿಯು ಪದ್ಯರೂಪದಲ್ಲಿಯೆ ರಚನೆಯಾಗಿದೆ. ಇದರ ಮುಖ್ಯಾಂಶಗಳು ಧಾರ್ಮಿಕ ವಿಚಾರಗಳೆ ಅಲ್ಲದೆ ಸಾಮಾಜಿಕ ಜೀವನ, ಆರ್ಥಿಕ ಜೀವನ ಎಲ್ಲ ಲೌಕಿಕ ವಿಷಯಗಳನ್ನೂ ಕುರಿತಾದ ಜಿಜ್ಞಾಸೆಗಳಿವೆ.

ಯಜುರ್ವೇದವು ಎರಡನೆಯ ವೇದವಾಗಿದೆ. ಇದು ಬಹುತೇಕ ಪದ್ಯರೂಪದಲ್ಲಿಯೆ ಇದ್ದರೂ ಮಧ್ಯೆ ಮಧ್ಯೆ ಗದ್ಯವೂ ಕೂಡ ಸೇರಿಕೊಂಡಿದೆ. ಇದರಲ್ಲಿ ಕೃಷ್ಣ ಮತ್ತು ಶುಕ್ಲ ಎಂಬ ಎರಡು ವಿಧಗಳಿವೆ. ಮೂರನೆಯದು ಸಾಮವೇದ. ವೇದಗಳಲ್ಲಿಯೆ ಇದಕ್ಕೆ ಅತ್ಯಂತ ಗೌರವದ ಸ್ಥಾನಮಾನವಿದೆ. ಇದರಲ್ಲಿ ಸಂಗೀತಶಾಸ್ತ್ರದ ಪ್ರಸ್ತಾಪ ಇದ್ದು ಭಾರತೀಯ ಸಂಗೀತಕ್ಕೆ ಇದು ಮೂಲ ಆಕರವಾಗಿದೆ. ಅಥರ್ವವೇದವು ನಾಲ್ಕನೆಯ ವೇದವಾಗಿದ್ದು ನಾಲ್ಕು ವೇದಗಳಲ್ಲಿಯೂ ಬಹಳ ಪ್ರಾಮುಖ್ಯತೆಯನ್ನು ಇದು ಪಡೆದುಕೊಂಡಿದೆ. ಇದರಲ್ಲಿ ಐಹಿಕ ಜೀವನ ವಿಧಾನಕ್ಕೆ ಹೆಚ್ಚು ಮಹತ್ವಕೊಟ್ಟು, ಆ ಕುರಿತಂತೆ ಜಿಜ್ಞಾಸೆ ನಡೆಸಲಾಗಿದೆ.

ವೇದಗಳ ನಂತರದ ಸಂಸ್ಕೃತದ ಸಾಹಿತ್ಯದಲ್ಲಿ ಬ್ರಾಹ್ಮಣಕಗಳು, ಅರಣ್ಯಕಗಳು ಮತ್ತು ವೇದಾಂಗಗಳು, ಉಪನಿಷತ್ತುಗಳು ಪ್ರಮುಖ ಸ್ಥಾನವನ್ನು ಪಡೆಯುತ್ತವೆ.

ಬ್ರಾಹ್ಮಣಕಗಳು ಗದ್ಯರೂಪದಲ್ಲಿ ರಚನೆಯಾಗಿರುವ ಉತ್ತಮ ಸಂಸ್ಕೃ ಸಾಹಿತ್ಯ ಕೃತಿಗಳು. ಇವುಗಳು ವೇದ ಮಂತ್ರಗಳನ್ನು ವಿವರಣಾತ್ಮಕ ತಿಳಿಸುವ ಕೃತಿಗಳಾಗಿವೆ. ಯಜ್ಞ ಎಂದರೆ ಏನು ? ಅದನ್ನು ಯಾರು ಮಾಡಬೇಕು ? ಏ ಮಾಡಬೇಕು ? ಯಜ್ಞಾಚರಣೆಯ ಫಲ ಏನು ? ಈ ಮೊದಲಾದ ವಿಚಾರಗಳನ್ನು ಕುರಿತಾದ ವಿಶ್ಲೇಷಣೆ ಇವುಗಳಲ್ಲಿ ಇದೆ. ಇವುಗಳ ರಚನೆಯ ಕಾಲ ಕ್ರಿ. ಪೂ. 1000 ಎಂದು ವಿದ್ವಾಂಸರು ಊಹಿಸಿದ್ದಾರೆ.

ಅರಣ್ಯಕಗಳು ಕೂಡ ಗದ್ಯದಲ್ಲಿ ರಚನೆಯಾಗಿರುವ ಸಾಹಿತ್ಯ ಕೃತಿಗಳಾಗಿವೆ ಇವುಗಳನ್ನು ಅರಣ್ಯದ ಮಧ್ಯದಲ್ಲಿ ರಚಿಸಿ, ಅಭ್ಯಾಸಿಸಿದುದರಿಂದ ಇವುಗಳಿ ಅರಣ್ಯಕಗಳು ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ. ಇವುಗಳಲ್ಲಿ ಆಧ್ಯಾತ್ಮಿಕ ಮತ್ತು ತತ್ತ್ವವಿಚಾರಗಳನ್ನು ಕುರಿತಂತೆ ಚರ್ಚಿಸಲಾಗಿದೆ ಒಂದೊಂದು ವೇದಕ್ಕೆ ಸಂಬಂಧಿಸಿದಂತೆ ಒಂದೊಂದು ಅರಣ್ಯಕಗಳ ರಚನೆಯಾಗಿವೆ. ಅರಣ್ಯಕಗಳ ನಂತರ ಉಪನಿಷತ್ತುಗಳು ರಚನೆಯಾಗಿವೆ ಇವುಗಳನ್ನು ವೇದಾಂತಗಳು ಎಂದು ಕೂಡ ಕರೆಯುತ್ತಾರೆ. ಇವುಗಳಲ್ಲಿ ಭಾರತೀಯ ತತ್ತ್ವಜ್ಞಾನ ಮತ್ತು ಧರ್ಮಸಿದ್ಧಾಂತಗಳನ್ನು ಕುರಿತಾದ ಚರ್ಚೆಯಿದೆ ಸುಮಾರು ಒಂದು ನೂರಕ್ಕಿಂತ ಹೆಚ್ಚು ಉಪನಿಷತ್ತುಗಳಿವೆ. ಆದರೆ ಇವುಗಳಲ್ಲಿ ಹದಿನೈದು ಉಪನಿಷತ್ತುಗಳು ಮುಖ್ಯವಾದವುಗಳಾಗಿವೆ.

ಉಪನಿಷತ್ತುಗಳ ನಂತರ ವೇದಾಂಗಗಳು, ಶಿಕ್ಷಾ, ವ್ಯಾಕರಣ, ಛಂದಸ್ಸು ಜ್ಯೋತಿಷ್ಯ ಈ ಮೊದಲಾದ ಗ್ರಂಥಗಳು ಸಂಸ್ಕೃತ ಸಾಹಿತ್ಯದಲ್ಲಿ ರಚನೆಯಾಗಿವ ಇವುಗಳು ಆಯಾಯ ವಿಷಯಗಳನ್ನು ಕುರಿತಂತೆ ಪ್ರಸ್ತಾವನೆಯನ ಒದಗಿಸುತ್ತವೆ.

ಸಂಸ್ಕೃತ ಸಾಹಿತ್ಯದಲ್ಲಿಯೆ ಸರ್ವಶ್ರೇಷ್ಠವಾದ ವಿಶ್ವಮಾನ್ಯವಾದ ಕೃತಿಗಳ ಎಂದರೆ ರಾಮಾಯಣ ಮತ್ತು ಮಹಾಭಾರತ ಗ್ರಂಥಗಳು. ಇವುಗಳು ಭಾರತೀ ಮಹಾಕಾವ್ಯಗಳೂ ಕೂಡ ಆಗಿವೆ. ವಾಲ್ಮೀಕಿ ಮಹಾಮುನಿ ರಚಿಸಿ ರಾಮಾಯಣ ಮಹಾಕಾವ್ಯ ಹಾಗೂ ವೇದವ್ಯಾಸ ಮಹರ್ಷಿ ರಚಿಸಿ ಮಹಾಭಾರತ ಮಹಾಕಾವ್ಯಗಳು ಬರೀ ಕಾಲಮಾನಗಳಿಂದಷ್ಟೇ ಅಲ್ಲ ಸಕಲೆಂಟು ದೃಷ್ಟಿಯಿಂದಲೂ ವಿಶ್ವಮಾನ್ಯ ಕೃತಿಗಳೆನಿಸಿವೆ.

ರಾಮಾಯಣ ಮಹಾಕಾವ್ಯದ ಕಾಲವನ್ನು ನಿಖರವಾಗಿ ಹೇಳ ಸಾಧ್ಯವಿಲ್ಲದಿದ್ದರೂ ಕ್ರಿ. ಪೂ. ಎಂಟು ಅಥವ ಆರನೆಯ ಶತಮಾನದ

ವಿದ್ವಾಂಸರು ಊಹಿಸಿದ್ದಾರೆ. ಇದರಲ್ಲಿ ಶ್ರೀ ರಾಮನ ಕಥೆಯನ್ನು ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ ಹಾಗೂ ಉತ್ತರ ಕಾಂಡಗಳೆಂಬ ಏಳುಕಾಂಡಗಳಲ್ಲಿ ವಿಶ್ಲೇಷಿಸಲಾಗಿದೆ. ಈ ಕೃತಿಯಲ್ಲಿ ಒಟ್ಟು ಐದುನೂರು ಸರ್ಗಗಳು ಹಾಗೂ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳು ಇದ್ದವೆಂದು ಹೇಳಲಾಗಿದ್ದು, ಇತ್ತೀಚೆಗೆ ಅವುಗಳು ಪ್ರಕ್ಷೇಪಗೊಂಡು ಅಧಿಕ ಸಂಖ್ಯೆಯಾಗಿವೆ. ಮೂಲ ವಾಲ್ಮೀಕಿ ರಾಮಾಯಣವು ಕಾಲಾನಂತರದಲ್ಲಿ ಅನೇಕ ಭಿನ್ನ ಭಿನ್ನ ಪಾಠಾಂತರಗಳಿಗೆ ಒಳಗಾಗಿದೆ.

ರಾಮಾಯಣವು ಉತ್ತಮವಾದ ಸಕಲ ಕಾವ್ಯ ಲಕ್ಷಣಗಳನ್ನೊಳಗೊಂಡ ಒಂದು ಕೃತಿಯಾಗಿದೆ. ಕಥನ ಶೈಲಿ, ಭಾಷೆಯ ಬಳಕೆ, ವರ್ಣನಾಕೌಶಲ, ಪಾತ್ರ ಚಿತ್ರಣ ಈ ಎಲ್ಲ ಅಂಶಗಳಲ್ಲಿಯೂ ಸರ್ವಶ್ರೇಷ್ಠವಾಗಿದೆ. ಈ ರಾಮಾಯಣವನ್ನು ಆಧರಿಸಿ ಭಾರತೀಯ ಎಲ್ಲ ಭಾಷೆಯಗಳಲ್ಲಿಯೂ ಸಮೃದ್ಧವಾದ ಸಾಹಿತ್ಯ ಸೃಷ್ಟಿಯಾಗಿದೆ. ಬಂಗಾಳಿಯಲ್ಲಿ ಕೃತ್ತಿವಾಸ ರಾಮಾಯಣ, ಕನ್ನಡದಲ್ಲಿ ಪಂಪರಾಮಾಯಣ, ತೊರವೆ ರಾಮಾಯಣ, ಹಿಂದಿ ಯಲ್ಲಿ ತುಳಸಿದಾಸನ ರಾಮಚರಿತಮಾನಸ, ತಮಿಳಿನಲ್ಲಿ ಕಂಬರಾಮಾಯಣ ಹಾಗೆಯೆ ಆಧುನಿಕ ಕಾಲದ ನಮ್ಮ ಕುವೆಂಪು ಅವರ ಶ್ರೀ ರಾಮಾಯಣದರ್ಶನಂ, ತೆಲುಗಿನಲ್ಲಿ ಡಾ. ವಿಶ್ವನಾಥ ಸತ್ಯನಾರಾಯಣರ ರಾಮಾಯಣ ಕಲ್ಪವೃಕ್ಷಮು, ಕನ್ನಡದ ಮಾಸ್ತಿಯವರ ಶ್ರೀ ರಾಮಾಶ್ವಮೇಧ ಈ ಮುಂತಾದವುಗಳು ಮೂಲ ರಾಮಾಯಣದ ಪ್ರೇರಣೆಯಿಂದ ಬಂದಂಥವುಗಳೇ ಆಗಿವೆ.

ರಾಮಾಯಣದ ನಂತರದ ಮತ್ತೊಂದು ಸಂಸ್ಕೃತ ಮಹಾಕಾವ್ಯ ಮಹಾಭಾರತ ಇದು ಕೂಡಾ ರಾಮಾಯಣದಷ್ಟೇ ಮಹತ್ವಪೂರ್ಣವಾದ ಸಾಹಿತ್ಯ ಕೃತಿಯಾಗಿದೆ. ಕೌರವರು ಮತ್ತು ಪಾಂಡವರ ಕುರುಕ್ಷೇತ್ರ ಯುದ್ಧದ ಕಥಾವಸ್ತುವುಳ್ಳ ಇದು ಇಡೀ ಭಾರತೀಯ ಸಾಹಿತ್ಯದಲ್ಲಿಯೆ ಸರ್ವಶ್ರೇಷ್ಠ ಸಾಹಿತ್ಯ ಕೃತಿಯೆನಿಸಿದೆ.

ಈ ಮಹಾಭಾರತ ಕೃತಿಯು ಸುಮಾರು ಒಂದುಲಕ್ಷಕ್ಕೂ ಅಧಿಕ ಶ್ಲೋಕಗಳನ್ನು ಹೊಂದಿರುವ ಒಂದು ಬೃಹತ್ ಗ್ರಂಥವಾಗಿದೆ. ಇದರಲ್ಲಿ ಮುಖ್ಯವಾಗಿ ಹದಿನೆಂಟು ಪರ್ವಗಳಿವೆ. ನೂರಾರು ಉಪ ಪರ್ವಗಳಿವೆ. ಇದನ್ನು ಭಾರತೀಯ ಜೀವನದ ವಿಶ್ವಕೋಶ ಎಂದು ಕೂಡ ಕರೆಯುತ್ತಾರೆ. ಇದರ ರಚನೆಯು

ಕಾಲವನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಕೆಲವರು ರಾಮಾಯಣಕ್ಕಿಂತ ಹಿಂದಿನದೆಂದು ಮತ್ತೆ ಕೆಲವರು ಕ್ರಿ. ಪೂ. ಆರಂಭ ಕಾಲದ್ದೆಂದು ಹೇಳುತ್ತಾರೆ.

ಈ ಗ್ರಂಥವು ಕೂಡ ರಾಮಾಯಣದಂತೆಯೇ ಎಲ್ಲ ರೀತಿಯಿಂದಲೂ ಶ್ರೇಷ್ಠವಾದುದಾಗಿದೆ. ಕಥನಕೌಶಲ, ಸನ್ನಿವೇಶ ಚಿತ್ರಣ, ಪಾತ್ರ ಜೋಡಣೆ ಈ ಎಲ್ಲವುಗಳೂ ಮನೋಹರವಾಗಿವೆ. ಈ ಕೃತಿಯನ್ನು, ಇದರ ಕಥೆಯನ್ನು ಅನುಸರಿಸಿ ಭಾರತೀಯ ಎಲ್ಲ ಭಾಷೆಗಳಲ್ಲಿಯೂ ಅಸಂಖ್ಯಾತ ಕೃತಿಗಳು ರಚನೆಯಾಗಿವೆ.

ರಾಮಾಯಣ, ಮಹಾಭಾರತಗಳಂತೆಯೇ ಭಗವದ್ಗೀತೆಯೂ ಕೂಡ ಸಂಸ್ಕೃತ ಸಾಹಿತ್ಯದ ಶ್ರೇಷ್ಠ ಕೊಡುಗೆಯಾಗಿದೆ. ಇದು ಕೃಷ್ಣಾರ್ಜುನರ ಸಂವಾದ ರೂಪದಲ್ಲಿದೆ. ಮನುಷ್ಯನ ಜೀವನ ವಿಧಾನ, ಆಚಾರ-ವಿಚಾರಗಳು ಈ ಎಲ್ಲವನ್ನು ರೂಪಿಸುವ ಮಹತ್ವದ ವಿಷಯಗಳನ್ನು ಕುರಿತಾದ ಜಿಜ್ಞಾಸೆ ಈ ಕೃತಿಯಲ್ಲಿದೆ.

ಈ ನಂತರದ ಕಾಲದಲ್ಲಿ ರಚಿತವಾದ ಮತ್ತೊಂದು ಪ್ರಮುಖ ಕೃತಿಯೆಂದರೆ ಹರಿವಂಶ. ಇದು ಶ್ರೀಕೃಷ್ಣನ ಜೀವನವನ್ನು ಕುರಿತಂತೆ, ಅನೇಕ ಆಖ್ಯಾನ-ಉಪಾಖ್ಯಾನಗಳಲ್ಲಿ ರಚಿತವಾಗಿದೆ. ಉಳಿದಂತೆ ಸಂಸ್ಕೃತದ ಪ್ರಮುಖ ಗ್ರಂಥಗಳೆಂದರೆ ಪುರಾಣಗಳು ಸುಮಾರು ಹದಿನೆಂಟು ಪುರಾಣಗಳಿವೆ. ಇವುಗಳೂ ಕೂಡ ಭಗವದ್ಗೀತೆಯಂತೆ ಸಂವಾದರೂಪದಲ್ಲಿ ರಚನೆಯಾಗಿವೆ. ಇವುಗಳಲ್ಲಿ ವೈಷ್ಣವ, ಬ್ರಾಹ್ಮ ಮತ್ತು ಶೈವಪುರಾಣಗಳೆಂದು ಮೂರು ವಿಧಗಳಿವೆ.

ವಿಷ್ಣುಪುರಾಣ, ಭಾಗವತ ಪುರಾಣ, ನಾರದೀಯ ಪುರಾಣ, ಗರುಡ ಪುರಾಣ, ಪದ್ಮ ಪುರಾಣ ಮತ್ತು ವರಾಹ ಪುರಾಣಗಳು ವೈಷ್ಣವ ಪುರಾಣಗಳಾಗಿವೆ. ಬ್ರಹ್ಮಪುರಾಣ, ಬ್ರಹ್ಮಾಂಡಪುರಾಣ, ಬ್ರಹ್ಮವೈವರ್ತಪುರಾಣ, ಮಾರ್ಕಾಂಡೇಯ ಪುರಾಣ, ಭವಿಷ್ಯಪುರಾಣ ಮತ್ತು ವಾಮನ ಪುರಾಣಗಳು ಬ್ರಾಹ್ಮ ಪುರಾಣಗಳಾಗಿವೆ. ವಾಯುಪುರಾಣ, ಲಿಂಗಪುರಾಣ, ಸ್ಕಂದಪುರಾಣ, ಅಗ್ನಿಪುರಾಣ, ಮತ್ಸ್ಯಪುರಾಣ ಮತ್ತು ಕೂರ್ಮಪುರಾಣಗಳು ಶೈವಪುರಾಣ ಗಳಾಗಿವೆ. ಈ ಹದಿನೆಂಟು ಪುರಾಣಗಳ ಜೊತೆಗೆ ಹದಿನೆಂಟು ಉಪಪುರಾಣಗಳೂ ಕೂಡ ಇವೆ. ಈ ನಂತರದ ಕಾಲದಲ್ಲಿ ಪಾಣಿನಿ ಮಹರ್ಷಿಯು ಸಂಸ್ಕೃತದ ವ್ಯಾಕರಣ ಕೃತಿಯನ್ನು ರಚಿಸಿದ್ದಾನೆ. ಅದರ ಹೆಸರು 'ಅಷ್ಟಾಧ್ಯಾಯಿನಿ' ನಂತರ ವರರುಚಿಯು 'ವಾರರುಚ' ಎಂಬ ಕಾವ್ಯವನ್ನು ಬರೆದಿದ್ದಾರೆ. ಪತಂಜಲಿ

ಮುನಿಯು ಶ್ರೇಷ್ಠ ಯೋಗಸೂತ್ರಗ್ರಂಥವನ್ನು ರಚಿಸಿದ್ದಾನೆ. ನಂತರ ಭಾಸ ಎಂಬ ಶ್ರೇಷ್ಠನಾಟಕಕಾರನು ಉತ್ತಮ ನಾಟಕಗಳನ್ನು ರಚಿಸಿದ್ದಾನೆ.

ಮುಂದಿನ ಕಾಲಘಟ್ಟದಲ್ಲಿ ಕಾಳಿದಾಸ, ಅಶ್ವಘೋಷ, ಈ ಮೊದಲಾದ ಮಹಾಕವಿಗಳು ಶ್ರೇಷ್ಠಗ್ರಂಥಗಳನ್ನು ರಚಿಸಿದ್ದಾರೆ. ಮಹಾಕವಿ ಕಾಳಿದಾಸನು ಭಾರತೀಯ ಸಾಹಿತ್ಯದಲ್ಲಿಯೆ ಶ್ರೇಷ್ಠನಾಗಿ, ಕವಿಕುಲಗುರುವಾಗಿ ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ವಿಕ್ರಮಾದಿತ್ಯರಾಜನ ಆಸ್ಥಾನದಲ್ಲಿದ್ದನು. ಇವನು ರಘುವಂಶ ಮತ್ತು ಕುಮಾರ ಸಂಭವ ಎಂಬ ಎರಡು ಮಹಾಕಾವ್ಯಗಳನ್ನು, ಮೇಘದೂತ ಮತ್ತು ಋತುಸಂಹಾರ ಎಂಬ ಖಂಡಕಾವ್ಯಗಳನ್ನು ಜೊತೆಗೆ ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶಿಯ, ಅಭಿಜ್ಞಾನ ಶಾಕುಂತಲ ಎಂಬ ನಾಟಕಗಳನ್ನು ರಚಿಸಿದ್ದಾನೆ.

ಅಶ್ವಘೋಷ ಮಹಾಕವಿಯು ಬುದ್ಧಚರಿತೆ ಎಂಬ ಉದ್ಗ್ರಂಥವನ್ನು ರಚಿಸಿದ್ದಾನೆ. ಕುಮಾರದಾಸನು ಜಾನಕೀಹರಣಂ ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಭಾರವಿಯು ಕಿರಾತಾರ್ಜುನೀಯ ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಶ್ರೀಹರ್ಷನೆಂಬ ಕವಿಯು 'ನೈಷಧೀಯ ಚರಿತೆ' ಎಂಬ ಮಹಾಕಾವ್ಯವನ್ನು ರಚಿಸಿದ್ದಾನೆ.

ಕ್ರಿ. ಶ. ಎಂಟನೆ ಶತಮಾನದ ನಂತರ ಸಂಸ್ಕೃತದಲ್ಲಿ ಐತಿಹಾಸಿಕ ಕಾವ್ಯಗಳು ರಚನೆಯಾಗಿವೆ. ಅಂತವುಗಳಲ್ಲಿ ಹರ್ಷವರ್ಧನನ ಆಸ್ಥಾನಕವಿ ಭಾಣಭಟ್ಟನು ರಚಿಸಿದ ಹರ್ಷಚರಿತೆ. ಕಾನ್ಯಕುಬ್ಜದ ಯಶೋವರ್ಮನ ಆಸ್ಥಾನಕವಿ ವಾಕ್ಪತಿ ಎಂಬುವನು ರಚಿಸಿದ ಗೌಡವಹೊ, ಧಾರಾನಗರದ ಸಿಂಧುರಾಜನ ಆಸ್ಥಾನಕವಿ ಪದ್ಮಗುಪ್ತ ರಚಿಸಿದ ನವಸಾಹಸಾಂಕ ಚರಿತೆ. ಬಿಲ್ಹಣ ಎಂಬುವನು ರಚಿಸಿದ ವಿಕ್ರಮಾಂಕ ದೇವಚರಿತೆ. ಕಲ್ಹಣನು ರಚಿಸಿದ ರಾಜತರಂಗಿಣಿ ಇವುಗಳು ಮುಖ್ಯವಾಗುತ್ತವೆ. ಸಂಸ್ಕೃತ ಸಾಹಿತ್ಯದಲ್ಲಿ ಎಲ್ಲ ಪ್ರಕಾರದ ಸಾಹಿತ್ಯವು ಕೂಡ ರಚನೆಯಾಗಿದೆ. ಆಧುನಿಕ ಕಾಲಕ್ಕೆ ಬಂದರೆ ಕಾವ್ಯ, ಕಾದಂಬರಿ, ಸಣ್ಣಕತೆ, ಪ್ರಬಂಧ, ಪ್ರವಾಸಸಾಹಿತ್ಯ, ವಿಮರ್ಶೆ ಈ ಎಲ್ಲವುಗಳಲ್ಲಿಯೂ ಸಂಸ್ಕೃತ ಸಾಹಿತ್ಯ ರಚನೆಗೊಂಡಿದೆ. ಇನ್ನೂ ರಚನೆಯಾಗುತ್ತಲೆ ಇದೆ. ಆಧುನಿಕ ಸಂಸ್ಕೃತಕವಿಗಳಲ್ಲಿ ರಾಮಶಾಸ್ತ್ರಿ, ಮಂಡಿಕಲ್ ವರದಾಚಾರ್, ಗಲಗಲಿರಾಮಾಚಾರ್, ಶ್ರೀ ರಾಳ್ಳಪಳ್ಳಿ ಅನಂತಕೃಷ್ಣಶರ್ಮ, ಡಾ. ಕೆ. ಎಸ್. ನಾಗರಾಜನ್ ಈ ಮೊದಲಾದವರು ಮುಖ್ಯರಾಗಿದ್ದಾರೆ.

# ಕಾಶ್ಮೀರಿ

ಕಾಶ್ಮೀರಿ ಭಾಷೆಯು ಜಮ್ಮು ಮತ್ತು ಕಾಶ್ಮೀರ ರಾಜ್ಯದ ಆಡಳಿತ ಭಾಷೆ. ಸುಂದರಗಿರಿಧಾಮಗಳ ಪ್ರದೇಶವಾದ ಕಾಶ್ಮೀರದ ಸುಮಾರು ಎಡೂವರೆ ಕೋಟಿ ಜನರು ಈ ಭಾಷೆಯನ್ನು ಮಾತನಾಡುತ್ತಾರೆ. ಈ ಭಾಷೆಯು ಕೆಲವೊಂದು ಅಂಶಗಳಲ್ಲಿ ಆರ್ಯ ಮತ್ತು ದರದ್ ಭಾಷೆಗಳನ್ನು ಹೋಲುತ್ತದೆ. ಇದು ಪೈಶಾಚಿ ಪಾಕೃತದಿಂದ ರೂಪಗೊಂಡು ಸ್ವತಂತ್ರವಾಗಿದೆ ಎಂದು ವಿದ್ವಾಂಸರು ಊಹಿಸಿದ್ದಾರೆ.

ಕಾಶ್ಮೀರವು ಶೈವ ಧಾರ್ಮಿಕ ಪಂಥಗಳ ಮೂಲಸ್ಥಾನವಾಗಿದೆ. ಹಾಗಾಗಿ ಆರಂಭಕಾಲದ ಕಾಶ್ಮೀರಿ ಸಾಹಿತ್ಯ ಕೂಡ ಶೈವ ಧಾರ್ಮಿಕ ಪಂಥದ ಪ್ರಭಾವವನ್ನು ಹೊಂದಿದೆ. ಅನೇಕ ಶೈವ ದರ್ಶನ ಗ್ರಂಥಗಳೆ ಮೊದಮೊದಲ ಕಾಶ್ಮೀರಿ ಗ್ರಂಥಗಳಾಗಿವೆ. ಇಲ್ಲಿನ ಪ್ರಮುಖ ಕವಿಗಳಲ್ಲಿ ಪ್ರಮುಖನಾದವನೆಂದರೆ ಅಭಿನವಗುಪ್ತ. ಈತನು ಕವಿಯಾಗಿ, ಅಲಂಕಾರಿಕನಾಗಿ ಪ್ರಸಿದ್ಧನಾಗಿದ್ದಾನೆ. ಇವನು 'ತಂತ್ರಸಾರ' ಎಂಬ ಕೃತಿಯನ್ನು ರಚಿಸಿದ್ದಾನೆ. ಇದು ಸಂಸ್ಕೃತ ಕೃತಿಯಾದರೂ ಇದನ್ನನುಸರಿಸಿಯೆ ಮೊದಲ ಕಾಶ್ಮೀರಿ ಕೃತಿಗಳು ರಚನೆಯಾಗಿವೆ. ನಂತರದ ಕಾಲದಲ್ಲಿ ಇಲ್ಲಿನ ಸಾಹಿತ್ಯವು ವೈಷ್ಣವ ಮತ್ತು ಬೌದ್ಧ ಧರ್ಮಗಳ ಪ್ರಭಾವವನ್ನು ಕೂಡ ಪಡೆಯಿತು. ಆ ನಿಟ್ಟಿನಲ್ಲಿಯೂ ಅನೇಕ ಕೃತಿಗಳು ರಚನೆಯಾಗಿರುವುದನ್ನು ನಾವು ಕಾಣಬಹುದಾಗಿದೆ.

ಮುಂದಿನ ಕಾಲಘಟ್ಟದಲ್ಲಿ ಇಸ್ಲಾಂ ಮತ ಹಾಗೂ ಪರ್ಶಿಯನ್ ಭಾಷೆಯ ಪ್ರಭಾವ ಕಾಶ್ಮೀರದ ಮೇಲೆ ಅಪಾರವಾಗಿ ಆಯಿತು. ಆ ಕಾರಣದಿಂದ ಕೆಲಕಾಲದವರೆಗೆ ಕಾಶ್ಮೀರಿ ಭಾಷೆಯು ಮೃತಭಾಷೆಯಂತೆ ಆಯಿತು. ಬಹುತೇಕ ಎಲ್ಲ ರೀತಿಯಲ್ಲೂ ಪರ್ಶಿಯನ್ ಭಾಷೆಯೆ ಬಳಕೆಯಾಗತೊಡಗಿತು. ನಂತರ ಉರ್ದು ಭಾಷೆ ತನ್ನ ಪ್ರಭಾವವನ್ನು ಬೀರಿತು ಹಾಗಾಗಿ ಈ ಅವಧಿಯಲ್ಲಿ ಅಂದರೆ ಕ್ರಿ. ಶ. ಹನ್ನೊಂದು ಮತ್ತು ಹನ್ನೆರಡನೆಯ ಶತಮಾನದಲ್ಲಿ ಕಾಶ್ಮೀರಿ ಸಾಹಿತ್ಯ ತುಂಬಾ ವಿರಳವಾಗಿ ಬೆಳೆಯಿತು.

ಕ್ರಿ. ಶ. ಹನ್ನೆರಡನೆಯ ಶತಮಾನದ ತರುವಾಯ ಪುನಃ ಕಾಶ್ಮೀರಿ ಸಾಹಿತ್ಯ ಪುನರುಜ್ಜೀವನ ಪಡೆಯಿತು. ಅನೇಕ ಧಾರ್ಮಿಕ, ಆಧ್ಯಾತ್ಮಿಕ ಮತ್ತು ಲಯಬದ್ಧ ರಚನೆಗಳ ಕೃತಿಗಳು ಹುಟ್ಟಿಬಂದವು. ಬಹುಜನಪ್ರಿಯ ಪ್ರಕಾರದ ಕವಿತೆಗಳೆನಿಸಿದ 'ಗಜಲ್'ಗಳು ರಚನೆಯಾದವು.

ಆಧುನಿಕ ಕಾಶ್ಮೀರಿ ಸಾಹಿತ್ಯವು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ಆರಂಭವಾಗುತ್ತದೆ. ಈ ಆರಂಭ ಕಾಲದಲ್ಲಿ 'ಮಾಜರ್', 'ಜಿಂಡಕೌಲ್' ಈ ಮೊದಲಾದವರುಗಳು ಪ್ರಮುಖ ಸಾಹಿತಿಗಳಾಗಿ ಕಂಡು ಬರುತ್ತಾರೆ. ಮಾಜರ್ ಅವರು ರಚಿಸಿರುವ ಗಜಲ್‌ಗಳು ಅತ್ಯುತ್ತಮ ರಚನೆಗಳಾಗಿದ್ದು ಅಪಾರ ಜನಪ್ರಿಯತೆಯನ್ನು ಪಡೆದಿವೆ.

ನಂತರ ಕಾಶ್ಮೀರಿ ಸಾಹಿತ್ಯದ ಪ್ರಮುಖ ಲೇಖಕರಾಗಿ ಮೊಯುದ್ದೀನ್, ಆಲಿ ಮುಹಮುದ್‌ಲೋಗ್, ಮುಹಮುದ್ ಅಮೀನ್‌ಕಾಮಿಲ್ ಈ ಮೊದಲಾದವರು ಬಂದರು. ಇವರುಗಳು ಅತ್ಯುತ್ತಮ ಕಾದಂಬರಿಕಾರರಾಗಿ ಹೆಸರು ಮಾಡಿದರು. ಮೊಯುದ್ದೀನ್ ಅವರು 'ಡೋಯೆಗ್‌ಡಾಗ್' ಎಂಬ ಪ್ರಸಿದ್ಧ ಕಾದಂಬರಿ ರಚಿಸಿದರು. ಅಂತೆಯೆ ಅಮೀನ್ ಕಾಮಿಲ್‌ರು 'ಗಟ್ಮೆಮನ್ಸ್‌ಗಶ್' ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಇವುಗಳು ಅತ್ಯುತ್ತಮ ಕಾದಂಬರಿಗಳಾಗಿ ಅಪಾರ ಜನಪ್ರಿಯತೆಯನ್ನು ಪಡೆದುಕೊಂಡಿವೆ.



ಬುಸ್ತಾನ್' ಎಂಬ ಗದ್ಯ ಕೃತಿಗಳು ಬಹಳ ಮುಖ್ಯವಾದವುಗಳಾಗಿವೆ. ಅನಂತರ ರಚಿಸಿದ 'ಮಸ್ನವಿ' ಕೃತಿ ಕೂಡ ಬಹಳ ಮುಖ್ಯವಾದುದ್ದೇ ಆಗಿದೆ.

ಹದಿನೇಳನೆ ಶತಮಾನದ ನಂತರ ಉರ್ದುವಿನಲ್ಲಿ ಗಜಲ್‌ಗಳ ರಚನೆ ಪ್ರಾರಂಭವಾಯಿತು. ಅಮೀರ್ ಖುಸ್ರು, ಕುತುಬ್‌ಷಾ ಹಾತ್ಮಿ, ವಾಲಿ, ಸಿರಾಜ್ ಈ ಮೊದಲಾದ ಪ್ರಮುಖ ಕವಿಗಳು ಉತ್ಕೃಷ್ಟವು ಗಜಲ್‌ಗಳನ್ನು ರಚಿಸಿದ್ದಾರೆ. ನಂತರ ಬಂದ ಮೀರ್‌ಹುಸೇನ್, ಬ್ರಾಹಮೀರ್ ಈ ಮೊದಲಾದವರು ಕೂಡ ಅತ್ಯಮೂಲ್ಯವಾದ ಉರ್ದು ಕವಿತೆಗಳನ್ನು ವಿನೂತನ ರೀತಿಯಲ್ಲಿ ರಚಿಸಿದ್ದಾರೆ. ...ಕ್‌ಇಮಾನ್. ಜಫರ್ ಅಲಿ ಇವರುಗಳೂ ಕೂಡ ಪ್ರಮುಖ ಉರ್ದು ಕವಿಗಳೆ ಆಗಿದ್ದಾರೆ.

ಆಧುನಿಕ ಉರ್ದು ಸಾಹಿತ್ಯವು ಹತ್ತೊಂಬತ್ತನೆಯ ಶತಮಾನದ ನಂತರ ಬೆಳೆಯತೊಡಗಿತು. ಈ ಕಾಲಘಟ್ಟದಲ್ಲಿ ಕವಿತೆ, ಕಾದಂಬರಿ, ಸಣ್ಣಕಥೆ ಮತ್ತು ಈ ವಿನೂತನ ಪ್ರಕಾರಗಳಲ್ಲಿ ಸಾಹಿತ್ಯ ಬೆಳವಣಿಗೆಯನ್ನು ಕಂಡಿತು. ಈ ಆಧುನಿಕ ಉರ್ದು ಸಾಹಿತ್ಯವು ಕೂಡ ಬೇರೆ-ಬೇರೆ ಸಾಹಿತ್ಯಗಳಂತೆ ಹಲವಾರು ಚಳುವಳಿಗಳಿಂದ ಪ್ರಭಾವಿತವಾಗಿದೆ. ಪ್ರಮುಖವಾಗಿ ವಸಾಹತುಶಾಹಿಯ ಪ್ರಭಾವ. ಆ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಸ್ವಾತಂತ್ರ್ಯ ಚಳುವಳಿ, ಅಲಿಘರ್ ಚಳುವಳಿ ಈ ಮೊದಲಾದವುಗಳಿಂದ ಅಪಾರವಾದ ಪ್ರೇರಣೆ ಮತ್ತು ಪ್ರಭಾವವನ್ನು ಈ ಸಾಹಿತ್ಯ ಪಡೆದುಕೊಂಡಿದೆ.

ಆಧುನಿಕ ಉರ್ದು ಕವಿಗಳು ಅನೇಕ ಉತ್ಕೃಷ್ಟವು ಕವಿತೆಗಳನ್ನು ರಚಿಸಿದ್ದಾರೆ. ಅಂಥವರುಗಳಲ್ಲಿ 'ಇಕ್ಬಾಲ್' ಬಹಳ ಪ್ರಮುಖನಾಗುತ್ತಾನೆ. ಆಧುನಿಕ ಉರ್ದು ಕಾದಂಬರಿ ಕ್ಷೇತ್ರವು ಬಹಳ ವ್ಯಾಪಕ ಬೆಳವಣಿಗೆಯನ್ನು ಕಂಡಿದೆ. ಪ್ರಮುಖ ಕಾದಂಬರಿಕಾರರಾದ 'ಪ್ರೇಮಚಂದ್', 'ರುಸ್ವಾ', 'ಸಾಜಿದ್ ಹೈದರ್' ಈ ಮೊದಲಾದವರು ಉತ್ಕೃಷ್ಟವಾದ ಕಾದಂಬರಿಗಳನ್ನು ರಚಿಸಿದ್ದಾರೆ. ರುಸ್ವಾ, ಅವರ 'ಉಮರಾವ್ ಜಾನ್ ಅದಾ' ಎಂಬ ಕಾದಂಬರಿಯು ಅಪಾರ ಜನಮನ್ನಣೆ ಗಳಿಸಿಕೊಂಡಿದೆ. ಹಾಗೆಯೇ ಮತ್ತೊಬ್ಬ ಕಾದಂಬರಿಕಾರರಾದ ಕುರ್ರತುಲ್-ಐನ್-ಹೈದರ್. ಅವರು ಆಧುನಿಕ ಉರ್ದು ಸಾಹಿತ್ಯದ ದಿಗ್ಗಜರೆನಿಸಿ ಭಾರತೀಯ ಸಾಹಿತ್ಯದ ಶ್ರೇಷ್ಠ ಪ್ರತಿಷ್ಠಿತವಾದ ಜ್ಞಾನಪೀಠ ಪುರಸ್ಕಾರವನ್ನು 1991ರಲ್ಲಿ ಪಡೆದಿದ್ದಾರೆ. ಇವರ ಸಮಗ್ರ ಸಾಹಿತ್ಯ ಸೇವೆಯನ್ನು ಗಮನಿಸಿ

ಇವರಿಗೆ ಜ್ಞಾನಪೀಠವನ್ನು ನೀಡಲಾಗಿದೆ. ಇವರ ಶ್ರೇಷ್ಠ ಕಾದಂಬರಿ 'ಆಗ್-ಕಾ-ದರ್ಯಾ' ಎಂಬುದಾಗಿದೆ.

ಉರ್ದು ನಾಟಕ ಕ್ಷೇತ್ರದಲ್ಲಿಯೂ ಕೂಡ ಸರ್ವಶ್ರೇಷ್ಠ ಕೃತಿಗಳನ್ನು ನಾವು ಕಾಣಬಹುದಾಗಿದೆ. ಪ್ರಮುಖ ಉರ್ದು ನಾಟಕಕಾರರಾದ ಬನಾರಸಿ, ತಾಲಿಬ್, ಆಶಾನ್ ಈ ಮೊದಲಾದವರು ಅತ್ಯುತ್ತಮ ನಾಟಕಗಳನ್ನು ರಚಿಸಿದ್ದಾರೆ.



# ಮಣಿಪುರಿ

ಮಣಿಪುರಿ ಭಾಷೆಯು ಭಾರತದ ಈಶಾನ್ಯ ಭಾಗದ ಪುಟ್ಟರಾಜ್ಯವಾದ ಮಣಿಪುರ ಎಂಬ ಸುಂದರ ನಾಡಿನ ರಾಜ್ಯ ಭಾಷೆ ಮತ್ತು ಆಡಳಿತ ಭಾಷೆ. ಇದು ಟಿಬೇಟೊ-ಬರ್ಮನ್ ಭಾಷಾ ಪರಿವಾರಕ್ಕೆ ಸೇರಿದ ಭಾಷೆ. ಅನೇಕ ಬುಡಕಟ್ಟು, ಉಪಭಾಷೆಗಳು ಸೇರಿಕೊಂಡು ಈ ಮಣಿಪುರಿ ಎಂಬ ಭಾಷೆ ಉದಯವಾಗಿದೆ. ಇದನ್ನು ಬರೆಯಲು ಮಣಿಪುರಿ ಲಿಪಿಯನ್ನೆ ಉಪ ಯೋಗಿಸುತ್ತಾರೆ.

ಮಣಿಪುರ ರಾಜ್ಯವು ತುಂಬಾ ಉತ್ತಮವಾದ ಜನಪದ ಕಲೆ ಹಾಗೂ ಸಾಹಿತ್ಯವನ್ನು ಒಳಗೊಂಡಿದೆ. ಆರಂಭಕಾಲದ ಈ ಭಾಷೆಯ ಸಾಹಿತ್ಯವೆಲ್ಲ ಜಾನಪದದಿಂದಲೆ ತುಂಬಿದೆ. ಸಮೃದ್ಧವಾದ ಜಾನಪದ ಸಂಪತ್ತು ಇಲ್ಲಿದ್ದು ಸುಂದರವಾದ ಜಾನಪದ ಹಾಡುಗಳು, ರಮಣೀಯವಾದ ಜಾನಪದ ಕಥೆಗಳು ಇವೆ.

ಮಣಿಪುರಿ ಶಿಷ್ಟ ಸಾಹಿತ್ಯವು ಕ್ರಿ. ಶ. ಹದಿಮೂರನೆ ಶತಮಾನದಿಂದ ಆರಂಭವಾಗಿದೆ. 'ಕುಂಬಾಬ' ಎಂಬುದು ಪ್ರಥಮ ಮಣಿಪುರಿ ಗ್ರಂಥವಾಗಿದೆ. ಇದರ ಜೊತೆಗೆ ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಅನುವಾದಗಳೂ ಕೂಡಾ ಆರಂಭಕಾಲದ ಮಣಿಪುರಿ ಸಾಹಿತ್ಯ ಕೃತಿಗಳಾಗಿವೆ. ಹಾಗೆಯೆ ಈ ಮಹಾಕಾವ್ಯಗಳ ಕಥೆಯನ್ನನುಸರಿಸಿ ರಚಿಸಿದ ಸ್ವತಂತ್ರ ಕೃತಿಗಳೂ ಕೂಡ ರಚಿತವಾಗಿವೆ. "ಲೇಥಕ್ ಲೇಖರೋಲ್", 'ಹಿಜಾನ್ ಹಿರೋವ್', 'ನುಮಿತ್ ಕಪ್ಪ', 'ಪಾಂಟೋಇಬ್ಬಿಜೊಸ್ಗುಲ್' ಈ ಮೊದಲಾದವುಗಳು ಆರಂಭಿಕ ಮಣಿಪುರಿಯ ಪ್ರಮುಖ ಕೃತಿಗಳಾಗಿವೆ. ಇವುಗಳಲ್ಲಿ 'ಹೆಜಾನ್ ಓರೋವ್' ಕೃತಿಯನ್ನು ಉಳಿದು ಇತರ ಕೃತಿಗಳು ಗದ್ಯಕೃತಿಗಳಾಗಿವೆ. ಹಿಜಾನ್‌ಹಿರೋವ್ ಕೃತಿಯು ಪದ್ಯ ಕೃತಿಯಾಗಿದ್ದು ಮಣಿಪುರಿಯ ಸರ್ವೋತ್ಕೃಷ್ಟ ಕೃತಿಯೆಂದು ಪರಿಗಣಿಸಲ್ಪಟ್ಟಿದೆ.

ಹದಿನೆಂಟನೆ ಶತಮಾನದ ತರುವಾಯ ಮಣಿಪುರಿ ಸಾಹಿತ್ಯದ ದ್ವಿತೀಯ ಘಟ್ಟ ಆರಂಭವಾಗುತ್ತದೆ. ಈ ಕಾಲಘಟ್ಟದಲ್ಲಿ ಸಾಹಿತ್ಯವು ಅಪಾರವಾದ

ಬೆಳವಣಿಗೆಯನ್ನು ಹೊಂದಿದೆ. ಈ ಕಾಲದಲ್ಲಿಯೂ ಕೂಡ ಸಾಂಪ್ರದಾಯಿ
ಕೃತಿಗಳ ರಚಿತವಾದರೂ ತನ್ನದೆ ಆದ ಸ್ವಂತಿಕೆಯಿಂದ ಕೂಡಿವೆ. ಈ ಕಾಲ
ಪ್ರಮುಖ ಕೃತಿ 'ಲಬಂಗ ಸಿಂಗ್' ಎಂಬುವವರು ರಚಿಸಿದ 'ರಾಮ್ ನಾನೊ
ಎಂಬುದಾಗಿದೆ. ಇದರಲ್ಲಿ ಕಥಾ ನಿರೂಪಣೆ, ಭಾಷೆಯ ಬಳಕೆ, ಸನ್ನಿವೇಶ ಚಿತ್ರ
ಈ ಮೊದಲಾದವುಗಳು ಓದುಗರನ್ನು ಮಂತ್ರಮುಗ್ಧರನ್ನಾಗಿಸುತ್ತವೆ.

ಮಣಿಪುರಿಯಲ್ಲಿ ಆಧುನಿಕತೆಯ ಪ್ರವೇಶವಾಗಿದ್ದು ಹತ್ತೊಂಬತ್ತ
ಶತಮಾನದ ಅಂತ್ಯ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ವೇಳೆ
ಕ್ರಿ. ಶ. 1926ರಲ್ಲಿ ರಚಿತವಾದ 'ಲೇಪಾರೆನ್' ಎಂಬುದು ಆಧುನಿ
ಮಣಿಪುರಿಯ ಮೊದಲ ಕೃತಿಯಾಗಿದೆ. ಇದರ ಕರ್ತೃ ಕಮಲ್‌ಸಿಂಗ್. ನಂತ
ಇದೇ ಲೇಖಕರು ರಚಿಸಿದ 'ಮಧಾಟಿ' ಎಂಬುದು ಮಣಿಪುರಿಯ ಮೊದ
ಕಾದಂಬರಿಯಾಗಿದೆ. ಡಿ.ಎ. ಸಿಂಗ್ ರಚಿಸಿದ 'ಕಂಸಬಂಧ' ಕೃತಿಯು ಆಧುನಿ
ಮಣಿಪುರಿಯ ಮಹಾಕಾವ್ಯ ಎಂದು ಪರಿಗಣಿಸಲ್ಪಟ್ಟಿದೆ. ಈ ಕೃತಿಯ ರಚನೆ
ಕಾಲ ಕ್ರಿ. ಶ. 1942. ಈ ಮುಂದಿನ ಕಾಲಾವಧಿಯಲ್ಲಿ ವಸಪಾತುಶಾ
ಸ್ಥಿತ್ಯಂತರಗಳು ಹಾಗೂ ಭಾರತ ಸ್ವಾತಂತ್ರ್ಯ ಹೋರಾಟದ ವಿವರಗಳನ
ಕುರಿತಾದ ಭಿನ್ನ-ಭಿನ್ನ ಕಥಾವಸ್ತುವುಳ್ಳ ಕಾದಂಬರಿಗಳು, ನಾಟಕಗಳ
ಸಣ್ಣಕಥೆಗಳು, ಪ್ರಬಂಧ ಲೇಖನ ಕೃತಿಗಳು ಮಣಿಪುರಿ ಸಾಹಿತ್ಯದಲ
ರಚನೆಯಾಗಿವೆ.



# ಡೋಗ್ರಿ

ಡೋಗ್ರಿಯು ಜಮ್ಮು ಮತ್ತು ಕಾಶ್ಮೀರದಲ್ಲಿ ಹೆಚ್ಚು ಪ್ರಚಲಿತವಿರುವ ಭಾಷೆ. ಜೊತೆಗೆ ಹಿಮಾಚಲ ಪ್ರದೇಶದಲ್ಲಿಯೂ ಇದರ ಹರವು ಇದೆ. ಇದೊಂದು ಇತ್ತೀಚಿನ ಭಾಷೆ. ಹಲವಾರು ಉಪಭಾಷೆಗಳು, ಬುಡಕಟ್ಟು ಭಾಷೆಗಳು ಸೇರಿಕೊಂಡು ಈ ಭಾಷೆಯು ಉದಯವಾಗಿದೆ. ಇದನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯು ಕೂಡ ಅಂಗೀಕರಿಸಿದೆ. ಡೋಗ್ರಾ, ಗುಡ್ಡಗಾಡು ಪ್ರದೇಶದ ಬುಡಕಟ್ಟು ಜನರು ಈ ಭಾಷೆಯನ್ನು ಹೆಚ್ಚಾಗಿ ಬಳಸುವುದರಿಂದ ಇದಕ್ಕೆ ಡೋಗ್ರಿ ಎಂಬ ಹೆಸರು ಬಂದಿದೆ. ಇದನ್ನು ಬರೆಯಲು ದೇವನಾಗರಿ ಲಿಪಿಯನ್ನು ಬಳಸುತ್ತಾರೆ.

ಡೋಗ್ರಿ ಸಾಹಿತ್ಯವು ಕ್ರಿ. ಶ. ಹದಿನೈದನೆ ಶತಮಾನದ ಅಂತ್ಯಭಾಗದಿಂದಲೆ ಆರಂಭವಾಗುತ್ತದೆ. ಈ ಭಾಷೆಯಲ್ಲಿ ಅಪಾರವಾದ ಜಾನಪದ ಸಾಹಿತ್ಯ ಇದೆ. ಜಾನಪದ ಗೀತೆಗಳು, ಕಥೆಗಳು. ಲಾವಣಿಗಳು, ಒಗಟುಗಳು ಹಾಗೂ ಗಾದೆಗಳು ತುಂಬಾ ಹೇರಳವಾಗಿವೆ.

ಆರಂಭಕಾಲದ ಪ್ರಮುಖ ಕವಿಗಳೆಂದರೆ 'ಮಾನಕ್‌ಚಂದ್', 'ದೇವಿದಿಟ್ಟು', 'ಗಂಭೀರ್‌ರಾಯ್' ಈ ಮೊದಲಾದವರುಗಳಾಗಿದ್ದಾರೆ. ಇವರುಗಳು ಕ್ರಮವಾಗಿ ಹದಿನಾರು, ಹದಿನೇಳು, ಹದಿನೆಂಟನೆ ಶತಮಾನಕ್ಕೆ ಸೇರಿದ್ದು ತುಂಬಾ ಮಹತ್ವಪೂರ್ಣವಾದ ಸಾಹಿತ್ಯವನ್ನು ರಚಿಸಿದ್ದಾರೆ. ಡೋಗ್ರಿಯಲ್ಲಿ ಮಹತ್ವದ ಕೃತಿಯೆಂದರೆ ಹದಿನೇಳನೆ ಶತಮಾನದಲ್ಲಿ 'ತೆಹಲ್‌ದಾಸ್' ಎಂಬುವನು ರಚಿಸಿದ 'ರಾಜಾಲಿ' ಎಂಬುದಾಗಿದೆ. ಇದೊಂದು ರಾಜವಂಶಾವಳಿಯ ಕಥೆಯನ್ನು ಕುರಿತಾದ ಗ್ರಂಥವಾಗಿದೆ. ನಂತರದ ಪ್ರಮುಖ ಕೃತಿಯೆಂದರೆ ಮೂಲ ಬೈಬಲ್‌ನ ಡೋಗ್ರಿ ಅನುವಾದವಾಗಿದೆ. ಇದನ್ನು ಹದಿನೆಂಟನೆ ಶತಮಾನದಲ್ಲಿ ಬಂದ ಪಾಶ್ಚಿಮಾತ್ಯ ಪಾದ್ರಿಗಳು ರಚಿಸಿದ್ದಾರೆ. ಈ ನಂತರ ಹತ್ತೊಂಬತ್ತನೆ ಶತಮಾನದಲ್ಲಿ 'ಗಂಗಾರಾಮ್' ಎಂಬುವನು ಪ್ರಮುಖ ಕವಿಯಾಗಿ ಉತ್ಕೃಷ್ಟವಾದ ಸಾಹಿತ್ಯ ಕೃತಿಯನ್ನು ಮಾಡಿದ್ದಾನೆ. ಇಪ್ಪತ್ತನೆಯ ಶತಮಾನದಲ್ಲಿ 'ಹರದತ್ತಶಾಸ್ತ್ರಿ', 'ದೀನೂಭಾಯ್ ಪಂತ್', 'ಕುನ್ವರ್‌ವಿಯೋಗಿ'

ಈ ಮೊದಲಾದವರು ಸಾಹಿತ್ಯ ಕೃಷಿಯಲ್ಲಿ ತೊಡಗಿದರು. ದಿನಿಬಾಯ್‌ಪಂತ್ ಎಂಬುವನು ಆಧುನಿಕ ಡೋಗ್ರಿಯ ಪ್ರಮುಖ ಕವಿಯಾಗಿದ್ದಾನೆ. ಇವನಿಂದ ಡೋಗ್ರಿ ಸಾಹಿತ್ಯವು ಆಧುನಿಕತೆಯ ಸ್ಪರ್ಶವನ್ನು ಪಡೆದುಕೊಂಡಿತು ಕುನ್ವರ್‌ವಿಯೋಗಿಯು ಬಹುಜನಪ್ರಿಯವಾದ ಘಜಲ್‌ಗಳನ್ನು ಡೋಗ್ರಿಯಲ್ಲಿ ರಚಿಸಿದ್ದಾನೆ.

ಕ್ರಿ. ಶ. 1950ರ ನಂತರ ಡೋಗ್ರಿ ಸಾಹಿತ್ಯವು ಬಹಳ ವೇಗವಾದ ಮತ್ತು ಗಮನಾರ್ಹವಾದ ಬೆಳವಣಿಗೆಯನ್ನು ಹೊಂದಿದೆ. ಅನೇಕ ಕವಿ ಕಾದಂಬರಿಕಾರರು ಹಾಗೂ ಕಥೆಗಾರರು ತುಂಬಾ ಮಹತ್ವದ ಕೊಡುಗೆಯನ್ನು ಈ ಕಾಲಘಟ್ಟದಲ್ಲಿ ಡೋಗ್ರಿ ಭಾಷೆಗೆ ನೀಡಿದ್ದಾರೆ. ಚರಣ್‌ಸಿಂಗ್ ಪದ್ಮಾಸಚದೇವ್, ಮೋಹನ್‌ಲಾಲ್ ಸಪ್ರೋಲಿಯಾ, ಮಧುಕರ ಈ ಮುಂತಾದವರು ಕಾವ್ಯಕ್ಷೇತ್ರದಲ್ಲಿ ಅಪಾರವಾದ ಕೆಲಸ ಮಾಡಿದ್ದಾರೆ. ಹಾಗೆಯೆ ವೇದಾದಾಹಿ, ರಾಮನಾಥಶಾಸ್ತ್ರಿ, ಮದನಮೋಹನಶರ್ಮ, ನರೇಂದ್ರ ಖಾಜುರಿಯಾ ಈ ಮುಂತಾದವರು ಅತ್ಯುತ್ತಮ ಕಾದಂಬರಿಗಳನ್ನು ರಚಿಸಿದ್ದಾರೆ ನರೇಂದ್ರಕುಮಾರ ಖಾಜುರಿಯಾ ಅವರು ಸಣ್ಣಕತೆಗಾರರಾಗಿಯೂ ಕೂಡ ಪ್ರಸಿದ್ಧರಾಗಿ ಅತ್ಯುತ್ತಮ ಕಥೆಗಳನ್ನು ರಚಿಸಿದ್ದಾರೆ.



# ಕೊಂಕಣಿ

ಕೊಂಕಣಿಯು ಮರಾಠಿ ಭಾಷೆಯ ಒಂದು ಉಪಭಾಷೆಯಾಗಿದೆ. ಕೆಲವರು ಇದನ್ನು ಸ್ವತಂತ್ರಭಾಷೆ ಎಂದು ಕೂಡ ವಾದಿಸುತ್ತಾರೆ. ಈ ಭಾಷೆಯನ್ನಾಡುವ ಜನ ಗೋವಾ ರಾಜ್ಯದಲ್ಲಿ ಅಧಿಕವಾಗಿದ್ದಾರೆ. ಜೊತೆಗೆ ಮಂಗಳೂರು, ಬೊಂಬಾಯಿ ಹಾಗೂ ಕೇರಳ ರಾಜ್ಯದ ಕೆಲವೊಂದು ಕಡೆಗಳಲ್ಲಿಯೂ ಈ ಭಾಷೆಯನ್ನು ಮಾತನಾಡುತ್ತಾರೆ. ಈ ಭಾಷೆಯು ಬಹುಪಾಲು ಮರಾಠಿ ಹಾಗೂ ಹಿಂದಿ ಭಾಷೆಗಳನ್ನು ಹೋಲುತ್ತದೆ. ಇದನ್ನು ಬರೆಯಲು ಹೆಚ್ಚಾಗಿ ದೇವನಾಗರಿ ಲಿಪಿಯನ್ನು ಉಪಯೋಗಿಸುತ್ತಾರೆ. ಆದರೂ ಕೆಲವು ಕಡೆ ಕನ್ನಡ, ಮಲಯಾಳಂ ಲಿಪಿಗಳನ್ನು ಕೂಡ ಬಳಸುತ್ತಾರೆ. ರೋಮನ್ ಲಿಪಿಯನ್ನು ಕೂಡ ಬಳಸುತ್ತಾರೆ.

ಕೊಂಕಣಿಯಲ್ಲಿ ಹದಿನೇಳನೆ ಶತಮಾನದಲ್ಲಿ ಸಾಹಿತ್ಯ ರಚನೆ ಆರಂಭವಾಗಿದೆ. ಪ್ರಾರಂಭಿಕ ಹಂತದ ಕೊಂಕಣಿ ಸಾಹಿತ್ಯವೂ ಕೂಡ ಭಕ್ತಿರಚನೆಗಳಿಂದಲೆ ಆರಂಭವಾಗಿದೆ. ಮರಾಠಿ ಮೂಲದ ವೈಷ್ಣವ ಭಕ್ತಿಪಂಥವೆ ಕೊಂಕಣಿಯ ಮೇಲೂ ಪ್ರಭಾವ ಬೀರಿದೆ. ಮರಾಠಿ ಮೂಲದಲ್ಲಿದ್ದ ರಾಮಾಯಣ ಹಾಗೂ ಮಹಾಭಾರತಗಳೇ ಆರಂಭಕಾಲದಲ್ಲಿ ಕೊಂಕಣಿಗೆ ಅನುವಾದಗೊಂಡಿವೆ.

ಕೊಂಕಣಿ ಸ್ವತಂತ್ರ ಕೃತಿಯು ಹದಿನೆಂಟನೆ ಶತಮಾನದಲ್ಲಿ ರಚಿತವಾಗಿದೆ. ಆ ಗ್ರಂಥದ ಹೆಸರು 'ರಿಗೊ ಜೇಸು ಮೊಲ್ಲಾಂಟಮ್' ಇದರ ಕರ್ತೃ ಜೋಟಮ್ ಡಿ. ಮಿರಾಂಡ ಎಂಬುವರಾಗಿದ್ದಾರೆ. ಇದು ಕೊಂಕಣಿಯ ಶ್ರೇಷ್ಠ ಹಾಗೂ ಬೃಹತ್ ಗ್ರಂಥ ಎಂದು ಪರಿಗಣಿಸಲ್ಪಟ್ಟಿದೆ. ಇದೇ ಕಾಲದಲ್ಲಿ ರಚಿತವಾದ ಮತ್ತೊಂದು ಕೃತಿ 'ಪಾಪಿಯನ್ಸ್ ಜಿರಾತಿನ' ಇದನ್ನು ರಚಿಸಿದವರು ಡೋನಾ ಬೆರ್ರೆಟೊ ಎಂಬ ಪಾದ್ರಿ. ಈ ಎರಡೂ ಕೃತಿಗಳೂ ಕೂಡಾ ಕ್ರೈಸ್ತ ಧಾರ್ಮಿಕ ಗ್ರಂಥಗಳಾಗಿವೆ. ಈ ಅವಧಿಯ ಬಹುಪಾಲು ಸಾಹಿತ್ಯವೆಲ್ಲ ಕ್ರೈಸ್ತ ಧಾರ್ಮಿಕತೆಗೆ ಸಂಬಂಧಿಸಿದುದೇ ಆಗಿದೆ.

ಕೊಂಕಣಿಯ ಆಧುನಿಕ ಸಾಹಿತ್ಯವು ಇಪ್ಪತ್ತನೆ ಶತಮಾನದ ಮಧ್ಯಾವಧಿಯಿಂದ ಆರಂಭವಾಗುತ್ತದೆ. ಎಂ. ಸರ್ದೇಸಾಯಿ, ಶೆಣೈಗೊಂಯೆಂಬಾಬ್, ಆರ್.

ಪಿ. ಪಂಡಿತ್, ಬಿ. ಬೋರ್ಕರ್ ಈ ಮೊದಲಾದವರು ಆಧುನಿಕ ಕೊಂಕಣಿ
ಪ್ರಮುಖ ಕವಿಗಳಾಗಿದ್ದಾರೆ. ರಜಿನಾಲ್ಡೋ ಫರ್ನಾಂಡೀಸ್ ಮತ್ತು ವಿ.
ಪಿ. ಸಲ್ಡಾನ ಇವರು ಪ್ರಖ್ಯಾತ ಕೊಂಕಣಿ ಕಾದಂಬರಿಕಾರರಾಗಿ ಪ್ರಸಿ
ಹೊಂದಿದ್ದಾರೆ.



# ಸಿಂಧಿ

ಸಿಂಧಿ ಭಾಷೆಯು ಭಾರತದ ಗಡಿ ಪ್ರದೇಶ ಹಾಗೂ ಸಿಂಧ್ ಪ್ರಾಂತ್ಯದ ಪ್ರಮುಖ ಭಾಷೆಯಾಗಿದೆ. ಈ ಭಾಷೆಗೆ ನಮ್ಮ ಕೇಂದ್ರ ಸಾಹಿತ್ಯ ಅಕಾಡೆಮಿಯು ಮಾನ್ಯತೆಯನ್ನು ನೀಡಿದೆ. ಈ ಭಾಷೆಯ ಮೂಲದ ಬಗೆಗೆ ಯಾವುದೇ ಖಚಿತವಾದ ಮಾಹಿತಿ ದೊರೆತಿಲ್ಲ. ಒಟ್ಟಾರೆಯಾಗಿ ಇದು ಇಂಡೋಆರ್ಯನ್ ಭಾಷಾ ಪರಿವಾರದ ಭಾಷೆಯಾಗಿದೆ. ಇದು ತನ್ನದೆ ಆದ ಲಿಪಿಯನ್ನು ಹೊಂದಿದೆ.

ಸಿಂಧ್ ಭಾಷೆಯಲ್ಲಿ ಉತ್ತಮವಾದ ಸಾಹಿತ್ಯವು ರಚನೆಯಾಗಿದೆ. ಬಹುಪಾಲು ಈ ಸಾಹಿತ್ಯವೆಲ್ಲ ಇಸ್ಲಾಂ ಹಾಗೂ ಸೂಫಿ ಧಾರ್ಮಿಕತೆಯಿಂದ ಪ್ರಭಾವಿತವಾಗಿ ಬೆಳೆದಿದೆ. ಆರಂಭ ಕಾಲದಲ್ಲಿ ಈ ಭಾಷೆಯ ಸಾಹಿತ್ಯ ಮೌಖಿಕವಾಗಿಯೆ ಇತ್ತು. ಅಂದರೆ ಅದು ಜನಪದ ಸಾಹಿತ್ಯವಾಗಿತ್ತು. ಕ್ರಿ. ಶ. ಹದಿಮೂರನೆ ಶತಮಾನದ ಪೀರ್‌ಸಾದ್ರುದ್ದೀನ್ ಈ ಭಾಷೆಯ ಪ್ರಥಮ ಕವಿಯಾಗಿದ್ದಾನೆ. ಇವನು ಅನೇಕ ಧಾರ್ಮಿಕ ಕವಿತೆಗಳನ್ನು ರಚಿಸಿದ್ದಾನೆ.

ನಂತರ ಹದಿನೈದನೆ ಶತಮಾನದಲ್ಲಿ ಬಂದ ಸೂಫಿ ಅನುಭಾವಿ ಕವಿ ಕ್ವಾಸಿ ಕ್ವಾಜಾನ್ ಎಂಬುವನು ಉತ್ತಮವಾದ ಭಕ್ತಿ ರಚನೆಗಳನ್ನು ರಚಿಸಿದ್ದಾನೆ. ಇವನ ಸಮಕಾಲೀನನಾದ ಕರೀಮ್ ಷಾ ಎಂಬುವನು ಕೂಡ ಒಳ್ಳೆಯ ಕವಿಯಾಗಿ ಅತ್ಯುತ್ತಮವಾದ ಕವಿತೆಗಳನ್ನು ರಚಿಸಿದ್ದಾನೆ. ಈ ನಂತರ ಹದಿನಾರು ಮತ್ತು ಹದಿನೇಳನೆ ಶತಮಾನದಲ್ಲಿ ಮಿಯಾನ್‌ಷಾ ಇನಾತ್ ಅವರು ಬಹುಮುಖ್ಯ ಕವಿಯಾಗಿ ಕವಿತೆಗಳನ್ನು ರಚಿಸಿದ್ದಾರೆ. ಇದೇ ಕಾಲದಲ್ಲಿ ಅಬ್ದುಲ್ ಲತೀಫ್ ಅವರು ರಚಿಸಿದ ಗೀತೆಗಳು ಉತ್ತಮ ಭಾವಗೀತೆಗಳಾಗಿವೆ. ಈ ನಂತರ ಆಧುನಿಕ ಘಟ್ಟದಲ್ಲಿ ಚೆನ್‌ರಾಯ್‌ಸ್ವಾಮಿ, ರೋಹಲ್, ದಲ್‌ಪತ್ ಈ ಮುಂತಾದ ಇಂದೂ ಕವಿಗಳು ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಮೊಹಮದ್ ಹಸಿಲ್‌ಷಾ, ಮಹಮದ್‌ಗುಲ್, ಮಹಮದ್ ಖಾಸಿಂ, ಕ್ವಾಲಿಟಿಬೇಗ್ ಇವರುಗಳು ಕೂಡ ಸಿಂಧಿಯ ಪ್ರಮುಖ ಕವಿಗಳಾಗಿದ್ದಾರೆ. ಇವರುಗಳಲ್ಲಿ ಕ್ವಾಲಿಟ್‌ಬೇಗ್ ಅವರು ಬಹು ಪ್ರಸಿದ್ಧರಾಗಿದ್ದು ಅತ್ಯುತ್ತಮ ಕೃತಿಗಳನ್ನು

ರಚಿಸಿದ್ದಾರೆ. ಇವರು ಕಾದಂಬರಿಗಳು ಸಿಂಧಿಯಲ್ಲಿ ಜನಪ್ರಿಯ ಕಾದಂಬರಿಗಳೆನಿಸಿವೆ.

ಇದೇ ಆಧುನಿಕ ಕಾಲಘಟ್ಟದಲ್ಲಿನ ಇತರ ಸಾಹಿತಿಗಳೆಂದರೆ ಲಾಲ್‌ಚಂದ್, ಮೆಹರ್‌ಚಂದ್, ಕಿಷನ್‌ಖಾಟಿಆನಿ, ರಾಂಪಂಜ್ವಾನಿ, ಗೋವಿಂದಮಾಲ್ಹಿ ಈ ಮುಂತಾದವರು ಕವಿಗಳಾಗಿ ಮತ್ತು ಕಾದಂಬರಿಕಾರರಾಗಿ ಪ್ರಸಿದ್ಧಿ ಪಡೆದಿದ್ದಾರೆ.

ಸಿಂದ್ ಸಾಹಿತ್ಯವು ತುಂಬಾ ಅತ್ಯಮೂಲ್ಯ ಸಾಹಿತ್ಯವಾಗಿದ್ದು, ಇದು ಹಿಂದೂ-ಮುಸ್ಲಿಂ ಏಕತೆಯ ಸಂದೇಶವನ್ನು ಹೊತ್ತ ಸೂಫಿ ಸಾಹಿತ್ಯವಾಗಿದೆ.



ಬಿ. ಎಸ್. ಪ್ರಸಾದ್ ನಮ್ಮ ಸಂವೇದನಾಶೀಲ ಯುವ ಲೇಖಕರಲ್ಲಿ ಒಬ್ಬರು. ವಿದ್ಯಾರ್ಥಿ ದೆಸೆಯಿಂದಲೆ ಬರವಣಿಗೆಯಲ್ಲಿ ತೊಡಗಿಸಿಕೊಂಡಿರುವ ಇವರು ವಿವಿಧ ಆಸಕ್ತಿಗಳುಳ್ಳವರು. ಈವರೆಗೆ ಅನೇಕ ಲೇಖನಗಳು ಕವಿತೆಗಳನ್ನು ಬರೆದಿರುವ ಇವರಿಗೆ ನಾಡು ನುಡಿಗಳ ಬಗ್ಗೆ ಅಪಾರ ಅಭಿಮಾನವಿದೆ. ಪ್ರಸ್ತುತ ಈ ಕೃತಿಯಲ್ಲಿ ಅವರು ಭಾರತದಲ್ಲಿನ ಹಲವಾರು ಭಾಷೆಗಳನ್ನು ಕುರಿತಾದ ಒಂದು ಸ್ಥೂಲ ಪರಿಚಯವನ್ನು ನೀಡಿದ್ದಾರೆ.